# ಸಮಾಧಿ

ಮರಣ ಶರೀರ





ಶಿಶು ಶರೀರ



ಸಮಾಧಿ


ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**



www.thraithashakam.org





# ಸಮಾಧಿ


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (72) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದಕರು

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಜುಲೈ–2016

ಪ್ರತಿಗಳು : 1000 **ಬೆಲೆ. 70/–**

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ– ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ x ವಿಗ್ರಹ – ದೈವ x ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
    ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
    ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
    ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
    ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
    ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
    ಮಹೇಂದ್ರಜಾಲ,
    ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
    (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–
    ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
    ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P
Cell : ಶ್ರೀನಿವಾಸ–09705864675, ಲಕ್ಷ್ಮಿಣಾರಾಯಣಾಚಾರಿ–09440556968.
ವೆಂಕಟೇಶ್–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು (ಪೊ)
ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನೆಂ.–38,
ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ,
(ತಾ) ಮಾನವಿ, ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆನ್ಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್,
ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲೀಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಸಮಾಧಿ



ಸಮಾಧಿ ಎಂಬ ಪದ ಬಹಳ ಕಾಲದಿಂದ ಪ್ರಚಾರದಲ್ಲಿದ್ದರೂ, ಆ ಪದವು ಕಾಲಗಮನದಲ್ಲಿ ರೂಪಾಂತರ ಹೊಂದಿದೆಯೆಂದು ತಿಳಿಯುತ್ತದೆ. ಇಂದು ಸಮಾಧಿ ಎಂದು ಕರೆಯಲ್ಪಡುತ್ತಿರುವ ಈ ಪದವು ಮೊದಲು ಸಮಾದಿಯಾಗಿ ಇತ್ತು. ಮೊದಲು ಸಮಾದಿ ಕೊನೆಗೆ ಕಾಲಗಮನದಲ್ಲಿ ಸಮಾಧಿಯಾಗಿ ಬದಲಾದರೂ, ಸಮಾದಿ ಮತ್ತು ಸಮಾಧಿಗೆ ಬೇರೆ ಅರ್ಥಗಳಿದ್ದರೂ, ಜನರೆಲ್ಲರಿಗೂ ತಿಳಿದ ಅರ್ಥ ಒಂದಿದೆ. ಅದೇನೆಂದರೆ, ಮನುಷ್ಯ ಸತ್ತುಹೋದ ನಂತರ ಮೃತದೇಹವನ್ನು ಭೂಮಿಯಲ್ಲಿ ಹೂತಿಡುವುದನ್ನು ಸಮಾಧಿ ಎನ್ನುತ್ತಿದ್ದಾರೆ. ಈ ಭಾವವನ್ನು ಅನುಸರಿಸಿ ಕೆಲವು ಮತಗಳಲ್ಲಿ, ಸತ್ತುಹೋದ ಮನುಷ್ಯರನ್ನು ಪ್ರಳಯಕಾಲದಲ್ಲಿ ದೇವರು ಮತ್ತೆ ಸಮಾಧಿಗಳಿಂದ ಎಬ್ಬಿಸುತ್ತಾನೆಂದು, ಆಗ ಅವರು ಮಾಡಿಕೊಂಡ ಪಾಪಪುಣ್ಯಗಳನ್ನು ವಿಚಾರಿಸಿ ಪಾಪಕ್ಕೆ ತಕ್ಕ ಹಾಗೆ ನರಕಕ್ಕೆ, ಪುಣ್ಯಕ್ಕೆ ತಕ್ಕ ಹಾಗೆ ಸ್ವರ್ಗಕ್ಕೆ ಕಳುಹಿಸುತ್ತಾನೆಂದು ಹೇಳಿಕೊಳ್ಳುತ್ತಿದ್ದಾರೆ. ಹಿಂದೂ ಮತದಲ್ಲಿಯೂ ಸ್ವರ್ಗ ನರಕಗಳಿವೆಯೆಂದು ಹೇಳಿದರೂ, ಮನುಷ್ಯ ಸತ್ತುಹೋದ ತಕ್ಷಣವೇ ಸ್ವರ್ಗ ನರಕಗಳಿಗೆ ಹೋಗುವ ನೆಂದು, ನಂತರ ಅವು ಮುಗಿದು ಹೋದ ತಕ್ಷಣವೇ ಮತ್ತೆ ಹುಟ್ಟುವನೆಂದು ಹೇಳಿಕೊಳ್ಳುತ್ತಿದ್ದಾರೆ. ಒಟ್ಟಾರೆ ಎಲ್ಲಾ ಮತದವರೂ ಸ್ವರ್ಗ ನರಕ ಲೋಕಗಳಿವೆಯೆಂದು ನಂಬುತ್ತಿದ್ದಾರೆ. ಸತ್ತು ಹೋದ ಶರೀರವನ್ನು ಸಮಾಧಿ ಮಾಡುವುದೆನ್ನುವುದು ಎಲ್ಲ ಮತಗಳಲ್ಲಿಯೂ ಇದೆ. ಸ್ವರ್ಗ ನರಕಗಳು ಮನುಷ್ಯನ ನಂಬಿಕೆಯೇ ಹೊರತು ನೋಡಿ ಬಂದು ಹೇಳಿದವರು ಯಾರೂ ಇಲ್ಲ. ಆದರೆ ಸಮಾಧಿ ಎನ್ನುವುದು ಸತ್ತುಹೋದ ಮನುಷ್ಯನನ್ನು ಹೂತಿಡುವ ಜಾಗ ಎಂದು ಪ್ರತ್ಯಕ್ಷವಾಗಿ ಎಲ್ಲರಿಗೂ ಗೊತ್ತು. ಸ್ವರ್ಗ ನರಕಗಳು ಕೇವಲ ನಂಬಿಕೆ ಮಾತ್ರವೇ ಆದರೆ, ಸಮಾಧಿ ಮಾತ್ರ ಪ್ರತ್ಯಕ್ಷ ಸತ್ಯ.

ಜನರ ಮನೋಭಾವನೆಯಲ್ಲಿ ಸಮಾಧಿ ಒಂದು ಪವಿತ್ರ ಭಾವದಿಂದಲೇ ಇದೆ. ಒಬ್ಬ ದೊಡ್ಡ ವ್ಯಕ್ತಿಯ ಮೃತದೇಹವನ್ನು ಸುಟ್ಟರೂ, ಸುಟ್ಟ ಬೂದಿಯನ್ನು ಸಮುದ್ರದಲ್ಲಿ ಬೆರೆಸಿದರೂ, ಸುಟ್ಟ ಜಾಗದಲ್ಲಿ ಆ ವ್ಯಕ್ತಿಯ ನೆನಪಿಗೆ ಒಂದು

ಸಮಾಧಿಯನ್ನು ನಿರ್ಮಿಸಿ, ಇದು ಇಂತಹ ಒಬ್ಬ ವ್ಯಕ್ತಿಯ ಸಮಾಧಿ ಎಂದು ಹೇಳಿಕೊಳ್ಳುತ್ತಿದ್ದಾರೆ. ಇಸ್ಲಾಮ್ ಮತದ ಒಂದು ವರ್ಗದವರು ದೈವಮಾರ್ಗದಲ್ಲಿ ನಡೆದ ದೊಡ್ಡ ವ್ಯಕ್ತಿಗಳ ಸಮಾಧಿಗಳಿಗೆ ದರ್ಗಾಗಳೆಂದು ಹೆಸರಿಟ್ಟು ಗೌರವದಿಂದ ಆರಾಧಿಸುತ್ತಿದ್ದಾರೆ. ಹಾಗೆ ಹಿಂದೂ ಮತದಲ್ಲಿ ಸಹ ಕೆಲವರ ಸಮಾಧಿಗಳನ್ನು ದೊಡ್ಡದಾಗಿ ಭಾವಿಸಿ ಪೂಜಿಸುವುದು ನಡೆಯುತ್ತಿದೆ. ಕೆಲವರಾದರೆ ತಮ್ಮ ಕುಟುಂಬದಲ್ಲಿ ವ್ಯಕ್ತಿಗಳ ಸಮಾಧಿಗಳನ್ನು ವರ್ಷಕ್ಕೊಂದು ಬಾರಿ ಪೂಜಿಸುತ್ತಿದ್ದಾರೆ. ಈ ರೀತಿ ಮನುಷ್ಯರಲ್ಲಿ ಸಮಾಧಿ ಎನ್ನುವುದು ಶ್ರೇಷ್ಠ ಭಾವನೆಯಲ್ಲಿಯೇ ಇದೆಯೆಂದು ಹೇಳಬಹುದು. ಕೆಲವು ಕಡೆಯಾದರೆ ಸಮಾಧಿ ಮನುಷ್ಯರ ಲೆಕ್ಕದಲ್ಲಿ ಪುಣ್ಯಕ್ಷೇತ್ರವಾಗಿ, ಪೂಜ್ಯಸ್ಥಳವಾಗಿ ಬದಲಾಗಿರುವುವು ಇವೆ. ಸಮಾಧಿಗಳು ಮನುಷ್ಯರ ಲೆಕ್ಕದಲ್ಲಿ ಶ್ರೇಷ್ಠ ಭಾವನೆಯಿಂದ ಇದ್ದರೂ ವಿಷಯವನ್ನು ದೃಷ್ಟಿಯಲ್ಲಿ ಇಟ್ಟುಕೊಂಡು, ಕೆಲವರು ರಾಜರು ಅವರ ಮೃತದೇಹಗಳಿಗೆ ಸಮಾಧಿಗಳನ್ನು ಕಟ್ಟುವ ಹಾಗೆ ಸಾಯುವುದಕ್ಕಿಂತ ಮೊದಲೇ ಏರ್ಪಾಟು ಮಾಡಿಕೊಂಡು ಸಮಾಧಿ ಕಟ್ಟಿಸಿಕೊಂಡರೂ, ಅವುಗಳ ಗುರುತು ಇಲ್ಲದೆ ಉಳಿದಿರುವವುಗಳು ಹಲವಾರು ಇವೆ. ಕೆಲವು ಗುರುತಿಸಲು ಉಳಿದಿರುವವು ಇವೆ. ತಾಜ್‌ಮಹಲ್ ಗುರುತಿಸಲು ಸಮಾಧಿಯಾಗಿ ಉಳಿದುಹೋದ ವಿಷಯ ಎಲ್ಲರಿಗೂ ಗೊತ್ತು. ಈ ರೀತಿ ಪ್ರಜೆಗಳ ಮನೋಭಾವನೆಯ ಮೇಲೆ ಬಹಳ ಧೃಡವಾಗಿ ಮುದ್ರೆಯನ್ನು ಹಾಕಿಕೊಂಡ ಸಮಾಧಿಯ ಸಮಾಚಾರವನ್ನು ಪೂರ್ತಿ ಬಿಚ್ಚಿ ನೋಡಿದರೆ ಹೀಗೆ ಇದೆ.

ಸಮಾಧಿ ಎಂದರೆ ಎಲ್ಲರಿಗೂ ಸಮವಾಗಿ ಅನ್ವಯಿಸುವುದೆಂದು ಅರ್ಥ. ಈ ಅರ್ಥ ಹೊಸದಾಗಿ ಕಾಣಿಸಿದರೂ ಇದೇ ನಿಜವಾದ ಅರ್ಥ. ಕೆಲವರು ಸಮಾಧಿ ಅನ್ನುವುದಕ್ಕೆ ಅರ್ಥವನ್ನು ಹೀಗೆ ಹೇಳಿದ್ದಾರೆ. **ಧಿ** ಎಂದರೆ ಬುದ್ಧಿಯೆಂದು, ಸಮ + ಧಿ = ಸಮಾಧಿಯೆಂದು, ಬುದ್ಧಿಗೆ ಸಮಾನವಾಗಿ ಇರುವುದೆಂದು ಹೇಳಿದ್ದಾರೆ. ಇದು ಹೇಳುವುದಕ್ಕೆ ಚೆನ್ನಾಗಿದೆ. ಆದರೆ ಆ ಅರ್ಥವು ಯಾವ ವಿಷಯದಲ್ಲಿ ಅನ್ವಯಿಸುತ್ತದೋ, ಬುದ್ಧಿಗೆ ಸಮಾನವಾಗಿ

ಇರುವುದು ಯಾವುದೋ, ಅದು ಬದುಕಿರುವಾಗಲಾ? ಸತ್ತುಹೋದಾಗಲಾ? ಎಂಬ ಪ್ರಶ್ನೆಗಳು ಏಳಬಹುದು. ಸತ್ತುಹೋದವನಿಗೆ ಬುದ್ಧಿ ಹೇಗೂ ಇರುವುದಿಲ್ಲ. ಬದುಕಿರುವವನಿಗೆ ಸಮಾಧಿಯೊಂದಿಗೆ ಕೆಲಸವಿಲ್ಲ, ಅವನು ಅದನ್ನು ಹೊಂದುವುದಿಲ್ಲ. ಸಮಾಧಿ ಸತ್ತುಹೋದವನಿಗೇ ಅವಶ್ಯಕತೆ ಇರುವಾಗ, ಅವನ ಬುದ್ಧಿಯನ್ನು ಕುರಿತು ಹೇಳಿಕೊಳ್ಳಬೇಕಾದ ಅವಶ್ಯಕತೆಯೂ ಇಲ್ಲ. ಏಕೆಂದರೆ ಸತ್ತುಹೋದವನಿಗೆ ಬುದ್ಧಿ ಇರುವುದಿಲ್ಲ. ಈ ರೀತಿ ಯೋಚಿಸಿದರೆ ಸಮವಾದ ಬುದ್ಧಿ ಎಂಬ ಅರ್ಥ ತಪ್ಪು ಎಂದು ತಿಳಿಯುತ್ತದೆ. ಯಾರು ಯಾವ ಅರ್ಥವನ್ನು ಹೇಳಿದರೂ ಅದು ಆಧ್ಯಾತ್ಮಿಕ ವಿದ್ಯೆಗೆ ಸರಿಹೋಗುವುದಿಲ್ಲ. ಆದ್ದರಿಂದ ಎಲ್ಲರಿಗೂ ಸಮವಾಗಿ ಜಾರಿಯಾಗುತ್ತದೆ ಅಥವಾ ಎಲ್ಲರಿಗೂ ಸಮಾನವಾಗಿ ಅನ್ವಯಿಸುತ್ತದೆನ್ನುವ ಅರ್ಥ ಆಧ್ಯಾತ್ಮಿಕಕ್ಕೂ, ಪ್ರತ್ಯಕ್ಷ ಅನುಭವಕ್ಕೂ ಸರಿಹೋಗುತ್ತದೆ. ಈ ದಿನ ಸಮಾಧಿ ಎಂದು ಕರೆಯಲಾಗುವ ಪದ ಪೂರ್ವದಲ್ಲಿ ಸಮ + ಆದಿ, ಸಮಾದಿಯಾಗಿ ಇರುತ್ತಿತ್ತು. ದಿ ಗೆ ಕೆಳಗೆ ಮಹಾಪ್ರಾಣ ಚಿಹ್ನೆಯಿಲ್ಲ. ಆದಿ ಎಂದರೆ ಮೊದಲನೇ ಅಥವಾ ಸೃಷ್ಠಿಯ ಆದಿಯಲ್ಲಿ ಎಂದು ಅರ್ಥ. ಸಮ ಎಂದರೆ ಎಲ್ಲರಿಗೂ ತಿಳಿದ ಅರ್ಥವೇ, ಸಮಾದಿ ಎಂದರೆ ಸೃಷ್ಠಿ ಆದಿಯಿಂದ ಎಲ್ಲರಿಗೂ ಸಮವಾಗಿ ಇರುವುದೆಂದು ಅಥವಾ ಅನ್ವಯಿಸುತ್ತದೆಂದು ಅರ್ಥ. ಇಲ್ಲಿ ವಿಶೇಷವೇನೆಂದರೆ ಸೃಷ್ಠಿ ಆದಿಯಿಂದ ಎನ್ನುವುದರಲ್ಲಿ ಸೃಷ್ಠಿ ಪ್ರಾರಂಭವಾದ ನಂತರ ಎಲ್ಲರಿಗೂ ಮೊದಲಿನಿಂದ ಸಮಾದಿ ಇದೆಯೆಂದು ತಿಳಿಯುತ್ತದೆ. ಆದಿಯಿಂದ ಸಮವಾಗಿ ಇರುವುದಾದ್ದರಿಂದ, ಈ ಸಮಾದಿ ಮೊದಲಿನಿಂದ ಪ್ರಾರಂಭವಾಗಿದೆಯೆಂದು ತಿಳಿಯುತ್ತಿದೆ. ಜೀವಿಯ ಮೊದಲ ಪುನರ್ಜನ್ಮದಲ್ಲಿಯೇ ಸಮಾದಿ ಇದೆ. ಮನುಷ್ಯ ಸತ್ತುಹೋದ ನಂತರ ಏರ್ಪಡುವುದು ಸಮಾದಿ ಅಲ್ಲ. ಮನುಷ್ಯ ಸತ್ತು ಹೋದಾಗ ಸಮಾದಿ ಎನ್ನುವುದು ಎಲ್ಲರಿಗೂ ಸಮವಾಗಿ ಅನ್ವಯಿಸುವುದಿಲ್ಲ. ಈ ಮಾತುಗಳು ಕೇಳುವ ನಿಮಗೆ ಇದೆಲ್ಲಾ ಹೊಸದಾಗಿಯೇ ಕಾಣಿಸುತ್ತದೆ. ಕೆಲವರು ನಮ್ಮ ಮಾತುಗಳನ್ನು ಯಾವ ಕಾರಣಕ್ಕೂ ನಂಬುವುದಿಲ್ಲ. ಕೆಲವರು ಅನ್ವೇಷಕರಾಗಿ ಇರುವವರು ಸಂಶೋಧನಾ ಬುದ್ಧಿಯಿಂದ ಯೋಚಿಸುವರು. ಹಾಗೆ ಯೋಚಿಸುವವರಿಗೆ ತಪ್ಪದೆ ಸತ್ಯ ತಿಳಿಯುತ್ತದೆ. ಒಬ್ಬ ಮನುಷ್ಯ

ಸತ್ತುಹೋದಾಗ ಅವನ ಶರೀರವನ್ನು ಭೂಮಿಯಲ್ಲಿ ಹೂತಿಟ್ಟರೂ, ಅದನ್ನು ಅರ್ಥದ ಪ್ರಕಾರ ಸಮಾಧಿ ಎಂದಾಗಲಿ, ಸಮಾದಿ ಎಂದಾಗಲಿ ಎನ್ನುವುದಕ್ಕೆ ಅವಕಾಶವಿಲ್ಲ. ಈ ಅರ್ಥಗಳು ಹೂತಿಟ್ಟ ಗುಣಿಗಳಿಗಾಗಲಿ, ಕಟ್ಟಿಸಲಾದ ಗೋರಿ ಗಳಿಗಾಗಲಿ ಅನ್ವಯಿಸುವುದಿಲ್ಲ.

ಎಲ್ಲ ಮತಗಳಲ್ಲಿಯೂ ಸಮಾಧಿ ಎನ್ನುವ ಪದವಿದ್ದರೂ, ಪ್ರವಕ್ತರೆಲ್ಲರೂ ಬಹಳ ದೊಡ್ಡ ಭಾವನೆಯಿಂದ ಹೇಳಿದರೂ, ಅದನ್ನು ಯಾವ ಮತಸ್ಥರೂ ಸರಿಯಾಗಿ ಅರ್ಥ ಮಾಡಿಕೊಂಡಿಲ್ಲವೆಂದು ಹೇಳುತ್ತಿದ್ದೇವೆ. ನಮಗೆಲ್ಲರಿಗೂ ಅರ್ಥವಾಗದಿರುವುದು, ನಮ್ಮನ್ನು ಮೀರಿದ ಜ್ಞಾನಪಂಡಿತರೆಲ್ಲರಿಗೂ ಅರ್ಥ ವಾಗದಿರುವುದು, ನಿನಗೊಬ್ಬನಿಗೆ ಅರ್ಥವಾಗಿದೆಯಾ ಎಂದು ಯಾರಾದರೂ ನನ್ನನ್ನು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ? ಯಾವುದು ನಿಜವಾದ ಜ್ಞಾನ, ಯಾರದು ನಿಜವಾದ ಜ್ಞಾನ ಎನ್ನುವ ಪ್ರಶ್ನೆಗೆ ಉತ್ತರವಾಗಿ, ಎಲ್ಲಿ ಪ್ರಶ್ನೆಯುಳಿದು ಉತ್ತರವಿಲ್ಲದೆ ಹೋಗುತ್ತಿದೆಯೋ ಅದು ನಿಜವಾದ ಜ್ಞಾನವಲ್ಲ. ಎಲ್ಲಾದರೆ ಪ್ರಶ್ನೆ ಉಳಿಯದೆ ಎಲ್ಲ ಕಡೆ ಉತ್ತರವಿದೆಯೋ, ಎಲ್ಲಿಯಾದರೆ ಯಾರೂ ಎದುರು ಪ್ರಶ್ನಿಸದ ಜ್ಞಾನವಿದೆಯೊ, ಅದು ನಿಜವಾದ ಜ್ಞಾನವೆಂದು ಹೇಳಬಹುದು. ನಾನು ಹೇಳಿದ ಸಮಾದಿ ವಿಷಯದಲ್ಲಾಗಲಿ, ಪ್ರವಕ್ತರು ಹೇಳಿದ ಸಮಾದಿ ವಿವರದಲ್ಲಾಗಲಿ ಎಲ್ಲಿಯೂ ಪ್ರಶ್ನೆಗಳು ಉಳಿಯುವುದಿಲ್ಲ. ಆದ್ದರಿಂದ ಇಲ್ಲಿ ನಾವು ಹೇಳುವ ಜ್ಞಾನ ನಿಜವಾದ ದೈವಜ್ಞಾನವೆಂದು, ಅದೇ ನಿಜವಾದ ಧರ್ಮವೆಂದು ತಿಳಿಸುತ್ತಿದ್ದೇವೆ. ಇತರರು ಹೇಳುವ ಸಮಾಧಿ ವಿಷಯದಲ್ಲಿ ಕೊನೆಗೆ ಪ್ರಶ್ನೆಗಳು ಉಳಿದು ಉತ್ತರ ಇಲ್ಲದೆ ಹೋಗುತ್ತದೆ. ಆದ್ದರಿಂದ ಅದು ಸೂತ್ರದ ಪ್ರಕಾರ ನಿಜವಾದ ದೈವಜ್ಞಾನ ಅಲ್ಲವೆಂದು ಹೇಳಬಹುದು. ಎಲ್ಲ ಮತಗಳ ಗ್ರಂಥಗಳಲ್ಲಿಯೂ ನಾವು ಹೇಳಿದ ವಿಷಯವನ್ನೇ ನೂರಕ್ಕೆ ನೂರು ಪಾಲು ಪ್ರವಕ್ತರೆಲ್ಲರೂ ಹೇಳಿದ್ದಾರೆ.

ಆದರೆ ಒಂದೇ ಒಂದು ತಪ್ಪು ನಡೆದಿದೆ, ಮನುಷ್ಯ ಮಾಯೆಯ ವಶವಾಗಿ ದೇವರು ಹೇಳಿರುವುದನ್ನು ತಪ್ಪಾಗಿ ಅರ್ಥ ಮಾಡಿಕೊಂಡಿದ್ದಾನೆ.

ಅದೇ ಮನುಷ್ಯ ಮಾಡಿದ ದೊಡ್ಡ ತಪ್ಪು. ಆ ತಪ್ಪಿನಿಂದಲೇ ದೇವರ ಧರ್ಮ ಮನುಷ್ಯರ ನಡುವೆ ಅಧರ್ಮವಾಗಿ ಬದಲಾಗಿ ಪ್ರಚಾರವಾಗಿದೆ. ಊರೆಲ್ಲಾ ಉತ್ತರವೆಂದರೆ ಒಬ್ಬನು ಮಾತ್ರ ದಕ್ಷಿಣ ಎಂದ ಹಾಗೆ ಮನುಷ್ಯರಾದ ಎಲ್ಲರೂ ಮರಣ ಬಂದಾಗ ಸಮಾಧಿ ಎಂದರೆ, ನಾವು ಮಾತ್ರ ಅದು ಸತ್ಯವೇ ಅಲ್ಲ, ಮನುಷ್ಯ ಜನ್ಮಿಸಿದಾಗಲೆ ಸಮಾದಿ ಎನ್ನುತ್ತಿದ್ದೇವೆ. ಯಾರೂ ಹೇಳದಿರುವುದನ್ನು ದೇವರು ಹೇಳಿದ್ದಾನೆ, ಪ್ರವಕ್ತರು ಹೇಳಿದ್ದಾರೆನ್ನುತ್ತ, ನೀನೊಬ್ಬನೇ ವಿರುದ್ಧವಾಗಿ ಏಕೆ ಮಾತನಾಡುತ್ತಿದ್ದೀಯಾ? ಎಂದು ನನ್ನನ್ನು ಯಾರಾದರೂ ಪ್ರಶ್ನಿಸಬಹುದು. ಅದಕ್ಕೆ ಧೈರ್ಯವಾಗಿ ನಾವು ಒಂದೇ ಉತ್ತರವನ್ನು ಹೇಳುತ್ತಿದ್ದೇವೆ. ಯಾವುದು ಸತ್ಯವೋ ಅದನ್ನೇ ನಾವು ಹೇಳುತ್ತಿದ್ದೇವೆ. ಅಸತ್ಯವನ್ನು ಲೋಕದಲ್ಲಿರುವವರೆಲ್ಲರೂ ಸತ್ಯವೇ ಎಂದರೂ ಅದು ಸತ್ಯವಲ್ಲ. ಅದನ್ನು ನಾನು ಒಪ್ಪಿಕೊಳ್ಳುವುದಿಲ್ಲ. ಅಷ್ಟೇ ಅಲ್ಲದೇ ದೇವರು ಹೇಳಿದ ಪ್ರತ್ಯಕ್ಷ ಸತ್ಯವನ್ನು ಗ್ರಹಿಸದೆ, ಅಸತ್ಯ ವಿಷಯವನ್ನು ನೀವು ಹೇಗೆ ಸಮರ್ಥಿಸುತ್ತಿದ್ದೀರೆಂದು ನಾವೂ ಸಹ ಪ್ರಶ್ನಿಸುತ್ತಿದ್ದೇವೆ. ಆದರೆ ನಮ್ಮ ಮಾತು ಬಹಳ ಜನರಿಗೆ ಮೊಂಡುವಾದವಾಗಿ ಕಾಣಿಸುತ್ತಿರುತ್ತದೆ. ಚೆನ್ನಾಗಿ ಯೋಚಿಸುವ ಕೆಲವರಿಗೆ ನಮ್ಮ ಮಾತು ಸತ್ಯವೆಂದು ತಿಳಿಯಬಹುದು. ಇಲ್ಲಿಯವರೆಗೆ  ಎಲ್ಲರಿಗೂ ಸಮಾಧಿ ಎನ್ನುವ ಪದ ಸಾಮಾನ್ಯವಾಗಿ ಕಾಣಿಸಿದರೂ, ಈಗ ನಾವು ಹೇಳುವ ಭಾವನೆಯಿಂದ **ಸಮಾದಿ** ಎನ್ನುವ ಶಬ್ದ ಸಾಮಾನ್ಯವಾದದ್ದು ಅಲ್ಲವೆಂದು, ಇದೇನೋ ದೊಡ್ಡ ಅರ್ಥದಿಂದ ಕೂಡಿರುವುದೇ ಅಲ್ಲದೆ, ಧರ್ಮಾಧರ್ಮ ವಿಷಯಗಳಿಂದ ತಳ ಹಾಕಿಕೊಂಡಿದೆಯೆಂದು ಅರ್ಥವಾಗುತ್ತಿದೆ. ಮನುಷ್ಯರೆಲ್ಲರೂ ಮೋಸಗೊಂಡ ಸಮಾಧಿ (ಸಮಾದಿ) ಎಂಬುದು ಏನೆಂದು? ಹೇಗೆ ಪ್ರತ್ಯಕ್ಷ ಪ್ರಮಾಣವೆಂದು ವಿವರಿಸಿಕೊಂಡು ನೋಡೋಣ.

ಗರ್ಭ ಅನ್ನುವ ಮಾತನ್ನು ಎಲ್ಲರೂ ಕೇಳಿರುತ್ತೇವೆ. ತಾಯಿಗರ್ಭ, ಭೂಗರ್ಭ ಎನ್ನುವ ಮಾತುಗಳನ್ನು ಕೇಳಿರುತ್ತೇವೆ. ಗರ್ಭ ಎನ್ನುವ ಪದಕ್ಕೆ ಅರ್ಥ ಕಾಣಿಸದೇ ಮುಚ್ಚಿಡುವುದೆಂದು ತಿಳಿಯುತ್ತಿದೆ. ತಾಯಿಗರ್ಭ ಶಿಶು

ಶರೀರವನ್ನು ಮುಚ್ಚಿದೆ. ಹಾಗೆ ಭೂಗರ್ಭವು ಮೃತಶರೀರವನ್ನು ಕಾಣಿಸದಂತೆ ಮುಚ್ಚಿಟ್ಟಿದೆ. ಇದರಿಂದ ಗರ್ಭಗಳು ಎರಡು ವಿಧಗಳೆಂದು ಒಂದನೆಯದು ಹುಟ್ಟುವ ಹೊಸ ಶರೀರವನ್ನು ಮುಚ್ಚಿಡುವುದು, ಎರಡನೆಯದು ಸತ್ತುಹೋದ ಹಳೆಯ ಶರೀರವನ್ನು ಮುಚ್ಚಿಡುವುದೆಂದು ತಿಳಿಯುತ್ತಿದೆ. ಭೂಗರ್ಭವನ್ನು ಎಲ್ಲರೂ ಸಮಾಧಿ ಎನ್ನುತ್ತಿದ್ದಾರೆ. ಭೂಗರ್ಭವನ್ನು ಸಮಾಧಿಯೆನ್ನುವುದು ಬಹಳ ದೊಡ್ಡ ತಪ್ಪು. ಏಕೆಂದರೆ! ಭೂಗರ್ಭದಲ್ಲಿನ ಶರೀರ ಮೃತ ಹೊಂದಿರುವುದು. ಆ ಶರೀರದಲ್ಲಿ ಜೀವಿಯು ಇಲ್ಲ ಮತ್ತು ಆತ್ಮವೂ ಇಲ್ಲ. ಜೀವಿಯಾಗಲಿ, ಆತ್ಮವಾಗಲಿ ಇರುವುದಾದರೆ ಜೀವಿಗೆ ಸಮವಾಗಿ ಅನ್ವಯಿಸುತ್ತಿದೆಂದು ಹೇಳಬಹುದು. ಜೀವಿಯೇ ಇಲ್ಲದಿರುವಾಗ ಜಡವಾದ ಶರೀರಕ್ಕೆ ಸಮವಾಗಿ ಅನ್ವಯಿಸುತ್ತದೆಂದು ಹೇಳುವುದಕ್ಕೆ ಅವಕಾಶವಿಲ್ಲ. ಜೀವಾತ್ಮನು ಇಲ್ಲದ ಶರೀರ ಗುರುತು ಇಲ್ಲದ್ದು, ಆದ್ದರಿಂದ ಮೃತ ಶರೀರಕ್ಕೆ ಸಮಾಧಿ (ಸಮಾದಿ) ಎನ್ನುವ ಮಾತು ಅನ್ವಯಿಸುವುದಿಲ್ಲ. ಹಾಗೆ ತಾಯಿಗರ್ಭದಲ್ಲಿನ ಶಿಶು ಶರೀರದಲ್ಲಿಯೂ ಜೀವಾತ್ಮನು ಇಲ್ಲ, ಆತ್ಮನು ಇಲ್ಲ. ಆದ್ದರಿಂದ ತಾಯಿಗರ್ಭವನ್ನು ಸಮಾದಿ ಎನ್ನುವುದಕ್ಕೆ ಅವಕಾಶವಿಲ್ಲ. ತಾಯಿಗರ್ಭವಾಗಲಿ, ಭೂಗರ್ಭವಾಗಲಿ, ಒಂದು ಹುಟ್ಟುವ ಶಿಶುಶರೀರವನ್ನು, ಮತ್ತೊಂದು ಸತ್ತುಹೋದ ಮೃತ ಶರೀರವನ್ನು ಮುಚ್ಚಿಡುವುವೇ ಹೊರತು ಅವು ಸಮಾದಿಗಳಲ್ಲ. **ಗರ್ಭ ಎಂದರೆ ಮರ್ಮವಾಗಿಡುವುದು ಅಥವಾ ರಹಸ್ಯವಾಗಿ ಮುಚ್ಚಿಡುವುದೆಂದು ಅರ್ಥ**.

ಭೂಗರ್ಭಕ್ಕಾಗಲಿ, ತಾಯಿಗರ್ಭಕ್ಕಾಗಲಿ ಸಮಾಧಿ (ಸಮಾದಿ) ಎಂಬ ಹೆಸರು ಅನ್ವಯಿಸದಿರುವಾಗ ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ಆಧ್ಯಾತ್ಮಿಕ ವಿದ್ಯೆಯನ್ನು ಅನುಸರಿಸಿ ಸಮಾದಿ ಎಂಬುದು ಎಲ್ಲಿದೆ? ಯಾವುದನ್ನು ಸಮಾಧಿ ಎನ್ನಬಹುದೆಂಬ ಪ್ರಶ್ನೆ ಬರಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ಒಬ್ಬ ಮನುಷ್ಯನನ್ನು ಪ್ರಕೃತಿಭಾಗವೆಂದು, ಆತ್ಮಭಾಗವೆಂದು ಎರಡು ಭಾಗಗಳಾಗಿ ವಿಭಜಿಸಿ ನೋಡಬಹುದು. ಪ್ರಕೃತಿಭಾಗದಲ್ಲಿ ಒಟ್ಟು ಶರೀರವಿರುತ್ತದೆ. ಆತ್ಮ ಭಾಗದಲ್ಲಿ ಜೀವಾತ್ಮ ಮತ್ತು ಆತ್ಮ ಇರುವುದು. ಅಷ್ಟೇ ಅಲ್ಲದೆ ಪರಮಾತ್ಮನೂ

ಇರುವನು. ಆದರೆ ಪರಮಾತ್ಮ ಶರೀರದ ಹೊರಗೂ, ಶರೀರದ ಒಳಗೂ ಇರುವುದರಿಂದ ಆತ್ಮಭಾಗಗಳಾಗಿ ಜೀವಾತ್ಮ, ಆತ್ಮವನ್ನು ಮಾತ್ರ ಪರಿಗಣನೆಗೆ ತೆಗೆದುಕೊಂಡಿದ್ದೇವೆ. ಜೀವಾತ್ಮ, ಆತ್ಮ ಇಲ್ಲದ 24 ಭಾಗಗಳ ಶರೀರವನ್ನು ಒಂದು ಭಾಗವಾಗಿ, ಜೀವಾತ್ಮ ಆತ್ಮವನ್ನು ಮಾತ್ರ ಒಂದು ಭಾಗವಾಗಿ ಗುರ್ತಿಸಿದರೆ ಪ್ರಕೃತಿ ಭಾಗವಾದ ಶರೀರಕ್ಕೆ ಸಮಾದಿ ಇಲ್ಲವೆಂದು ತಿಳಿಯುತ್ತದೆ. ಜಗತ್ತಿನಲ್ಲಿ ಧರ್ಮಗಳಿಗೆ ಹಾನಿ ಏರ್ಪಟ್ಟು ಅಧರ್ಮಗಳು ಪ್ರಚಾರವಾದಾಗ ಸಮಾದಿ ಎನ್ನುವ ಧರ್ಮವು ಅಧರ್ಮವಾಗಿ ಬದಲಾಗಿ, ವಾಸ್ತವವಾದ ಸಮಾದಿ ತಿಳಿಯದೆ ಹೋಗಿ, ಅಸತ್ಯವಾದ ಸಮಾದಿ ತಿಳಿಯುತ್ತದೆ. ಅದರಿಂದ ಜನರು ಭೂಗರ್ಭವನ್ನು ಸಮಾದಿ ಎಂದು ಹೇಳಿಕೊಳ್ಳುವುದು ನಡೆಯುತ್ತಿದೆ. ಭೂಗರ್ಭವನ್ನು ಸಮಾಧಿ ಎಂದುಕೊಳ್ಳುವುದು ಅಧರ್ಮವೆಂದು ಯಾರಿಗೂ ತಿಳಿಯದೆ ಹೋಗಿದೆ.

ಪ್ರಕೃತಿ ಭಾಗವಾದ ಶರೀರಕ್ಕಲ್ಲದೆ ಜೀವಾತ್ಮನಿಗೂ, ಆತ್ಮನಿಗೂ ಮಾತ್ರವೇ ಸಮಾದಿ ಇದೆಯೆಂದು, ಆತ್ಮ ಭಾಗಗಳಾದ ಜೀವಾತ್ಮ, ಆತ್ಮಗಳಿಗಿರುವ ಸಮಾದಿಯೇ ನಿಜವಾದ ಸಮಾದಿ ಎಂದು, ಅದೇ ದೈವಧರ್ಮವೆಂದು ತಿಳಿಯಬೇಕು. ಜೀವಾತ್ಮನಿಗೆ ಜನ್ಮ (ಪುನರ್ಜನ್ಮ) ಮೊದಲಿನಿಂದ ಇರುವುದರಿಂದ "ಆದಿ" ಎಂದು ಹೇಳುವುದೇ ಅಲ್ಲದೆ, ಜೀವಿಗಳೆಲ್ಲರಿಗೂ ಒಂದೇ ವಿಧವಾಗಿ ಅನ್ವಯಿಸುತ್ತದಾದ್ದರಿಂದ "ಸಮ" ಎಂದು ಹೇಳಲಾಗಿದೆ. ಅದನ್ನೇ ಪೂರ್ತಿಯಾಗಿ ಸಮಾದಿ ಎಂದು ಹೇಳಿದ್ದಾರೆ. ನಾವು ಹೇಳುವುದು ಎಲ್ಲರಿಗೂ ಹೊಸ ಮಾರ್ಗವಾಗಿ ಕಾಣಿಸಿದರೂ, ಇದು ಇಲ್ಲಿಯವರೆಗೂ ಕಾಣದಂತಿರುವ ಧರ್ಮವೆಂದು ತಿಳಿಯಬೇಕು. ಪ್ರವಕ್ತರೆಲ್ಲರೂ ಇದೇ ಧರ್ಮವನ್ನು ತಿಳಿಸಿದರೂ, ಪ್ರಜೆಗಳು ಅದನ್ನು ಪಡೆಯಲಾರದೆ ಹೋಗಿದ್ದಾರೆಂದು ಹೇಳಬಹುದು. ಪ್ರವಕ್ತರು ಹೇಳಿದ ಸಮಾದಿ ಧರ್ಮವನ್ನು ವಿಷದವಾಗಿ ತಿಳಿದುಕೊಂಡರೆ, ಮನುಷ್ಯ ಸತ್ತುಹೋದಾಗ ಶರೀರವನ್ನು ಬಿಟ್ಟು ಜೀವಾತ್ಮ, ಆತ್ಮಗಳು ಹೊರಗೆ ಹೋಗುತ್ತವೆ. ಆ ರೀತಿ ಮರಣದಲ್ಲಿ ಜೀವಾತ್ಮ, ಆತ್ಮಗಳು ಬಿಟ್ಟುಹೋದ ಶರೀರ ವನ್ನು ಭೂಗರ್ಭದಲ್ಲಿ (ಭೂಮಿಯಲ್ಲಿ) ಹೂತಿಟ್ಟರೆ ಅದು ಸಮಾದಿ ಅಲ್ಲ.

ಸಮ+ಆದಿ=ಸಮಾದಿ ಎನ್ನುವ ಅರ್ಥವು ಭೂಗರ್ಭಕ್ಕೆ ಅನ್ವಯಿಸುವುದಿಲ್ಲ. ಹಾಗೆ ತಾಯಿಗರ್ಭದಲ್ಲಿನ ಜೀವಾತ್ಮ, ಆತ್ಮವಿಲ್ಲದ ಶಿಶುಶರೀರಕ್ಕೂ ಸಮಾದಿ ಪದ ಅನ್ವಯಿಸುವುದಿಲ್ಲ. ಜೀವಾತ್ಮ, ಆತ್ಮ ಎಲ್ಲಿಗೆ ನಿಕ್ಷಿಪ್ತವಾಗಿ ಹೋಗುತ್ತಿದ್ದಾರೋ ಅದನ್ನೇ ಸಮಾಧಿ ಅಥವಾ ಸಮಾದಿ ಎನ್ನಬಹುದು. ಜೀವಿಯು ಜನ್ಮಿಸುವ ಸಮಯವನ್ನು "ಆದಿ" ಎನ್ನಬಹುದು. ಜೀವಿಯು ಶರೀರವನ್ನು ಧರಿಸಿದರೆ ಅದನ್ನು ಜನ್ಮ ಅಥವಾ ಪುನರ್ಜನ್ಮ ಎನ್ನುತ್ತಿದ್ದೇವೆ. ಹಾಗೆ ಶರೀರವನ್ನು ಧರಿಸಿದ ಮೊದಲ ಸಮಯವನ್ನು "ಆದಿ" ಎನ್ನುವುದೇ ಅಲ್ಲದೆ, ಅದು ಜೀವಿಗಳೆಲ್ಲರಿಗೂ ಸಮವಾಗಿ ಅನ್ವಯಿಸುತ್ತದೆಯಾದ್ದರಿಂದ ಸಮಾದಿ ಅನ್ನುತ್ತಿದ್ದಾರೆ. ಒಬ್ಬ ಜೀವಾತ್ಮನು ಶರೀರದಲ್ಲಿ ಪ್ರವೇಶಿಸಿ, ಆ ಶರೀರದಲ್ಲಿ ನಿಕ್ಷಿಪ್ತವಾಗಿ ಯಾರಿಗೂ ಕಾಣಿಸದ ಹಾಗೆ ಇರುವುದನ್ನು ವಾಸ್ತವವಾಗಿ ಸಮಾದಿ ಎನ್ನಬಹುದು.

ಆತ್ಮ, ಜೀವಾತ್ಮಗಳು ಎರಡೂ ಜೋಡಿ ಆತ್ಮಗಳು, ಒಂದನ್ನು ಬಿಟ್ಟು ಮತ್ತೊಂದು ಇರುವುದಕ್ಕೆ ಅವಕಾಶವಿಲ್ಲ. ಜೀವಿಯು ಜನ್ಮಗಳಿಗೆ ಹೋಗದೇ ಮೋಕ್ಷವನ್ನು ಹೊಂದಿದಾಗಲೇ ಆತ್ಮ ಜೀವಾತ್ಮ ಒಂದನ್ನೊಂದು ಸೇರುವುದು ನಡೆಯುತ್ತದೆ. ಅಲ್ಲಿಯವರೆಗೂ ಎಷ್ಟು ಯುಗಗಳು ಕಳೆದರೂ, ಎಷ್ಟು ಕಲ್ಪಗಳು ಮುಗಿದು ಹೋದರೂ ಜೀವಾತ್ಮ ಆತ್ಮಗಳು ಬೇರೆಯಾಗುವುದಿಲ್ಲ. ಶರೀರ ಸತ್ತಾಗ ಶರೀರವನ್ನು ಬಿಟ್ಟು ಹೋದ ಜೀವಾತ್ಮಗಳು ಆತ್ಮಗಳು ಕರ್ಮ ಪ್ರಕಾರ ನಿರ್ಣಯಿಸಲ್ಪಟ್ಟ ಬೇರೊಂದು ಶರೀರವನ್ನು ಸೇರುತ್ತವೆ. ಹಾಗೆ ಬೇರೊಂದು ಶರೀರವನ್ನು ಸೇರುವುದನ್ನು ಜನ್ಮ ಅಥವಾ ಪುನರ್ಜನ್ಮ ಎನ್ನಬಹುದು. ಶರೀರವನ್ನು ಬಿಟ್ಟು ಹೋಗುವುದನ್ನು ಮರಣವೆಂದು, ಹೊಸ ಶರೀರವನ್ನು ಸೇರುವುದನ್ನು ಜನನವೆಂದು, ಎಲ್ಲರಿಗೂ ತಿಳಿದರೂ ಮರಣದಲ್ಲಿ ಏನು ನಡೆಯುತ್ತಿದೆ, ಜನನದಲ್ಲಿ ಏನು ನಡೆಯುತ್ತಿದೆ ಎಂಬುದು ವಾಸ್ತವವಾಗಿ ಯಾರಿಗೂ ತಿಳಿದಿಲ್ಲ. ಜನನ ಮರಣಗಳು ಬ್ರಹ್ಮವಿದ್ಯಾ ಶಾಸ್ತ್ರದಲ್ಲಿ ಸಿದ್ಧಾಂತಗಳೇ ಆಗಿರುವಾಗ ಅವು ಯಾರಿಗೂ ತಿಳಿದಿಲ್ಲವಾದ್ದರಿಂದ ರಹಸ್ಯಗಳಾಗಿ ಉಳಿದುಕೊಂಡಿವೆ. ನಾವು ಈ ಹಿಂದೆ ಇವುಗಳ ವಿವರ ಎಲ್ಲರಿಗೂ

ಅರ್ಥವಾಗುವಂತೆ **"ಜನನ ಮರಣ ಸಿದ್ಧಾಂತ"**, **"ಮರಣ ರಹಸ್ಯ"**, **"ಪುನರ್ಜನ್ಮ ರಹಸ್ಯ"** ಎನ್ನುವ ಗ್ರಂಥಗಳನ್ನು ಬರೆದಿದ್ದೇವೆ. ಈಗ ಸಮಾದಿ ಎನ್ನುವ ಹೆಸರಿನಿಂದ ಈ ಚಿಕ್ಕ ಗ್ರಂಥವನ್ನು ಬರೆಯಲಾಗಿದೆ.

ಮರಣದಲ್ಲಿ ಜೀವಿಯು ಶರೀರವನ್ನು ಪೂರ್ತಿಯಾಗಿ ಬಿಟ್ಟು ಪುನರ್ಜನ್ಮಕ್ಕೆ ಹೋಗುತ್ತಿದ್ದಾನೆ. ಹಳೆಯ ಶರೀರವನ್ನು ಬಿಟ್ಟ ತಕ್ಷಣವೇ ತಡವಿಲ್ಲದೇ ಆತ್ಮದೊಂದಿಗೆ ಜೀವಾತ್ಮ ಹೊಸ ಶರೀರದೊಳಗೆ ಸೇರಿಕೊಳ್ಳುತ್ತದೆ. ಹಳೆಯ ಶರೀರ ಅಂದರೆ ಮೃತ ಹೊಂದಿರುವುದೆಂದು ಎಲ್ಲರಿಗೂ ತಿಳಿದಿದೆ. ಆದರೆ ಹೊಸ ಶರೀರದ ವಿಷಯದಲ್ಲಿಯೇ ಮನುಷ್ಯ ತಪ್ಪು ಮಾಡುತ್ತಿದ್ದಾನೆ. ಜೀವಾತ್ಮನು ಧರಿಸುವ ಶಿಶು ಶರೀರ ಹೊಸ ಶರೀರವೆಂದು ಎಲ್ಲರಿಗೂ ತಿಳಿದಿದ್ದರೂ, ಅದನ್ನು ಜೀವಿಯು ಯಾವಾಗ ಧರಿಸುತ್ತಿದ್ದಾನೆಂದು ಸರಿಯಾಗಿ ತಿಳಿಯದೆ ಹೋಗಿದ್ದಾರೆ. ಯಾವ ಹಂತದಲ್ಲಿ ಹೊಸ ಶರೀರವಾಗುತ್ತದೆ? ಜೀವಾತ್ಮನು ಯಾವಾಗ ಅದರೊಳಗೆ ಪ್ರವೇಶಿಸುತ್ತಿದ್ದಾನೆ? ಹೇಗೆ ಪ್ರವೇಶಿಸುತ್ತಿದ್ದಾನೆ? ಎನ್ನುವ ವಿಷಯಗಳೇ ಯಾರಿಗೂ ತಿಳಿಯದೆ ಹೋಗಿವೆ. ಯಾರಿಗೆ ತಿಳಿದರೂ ತಿಳಿಯದೆ ಹೋದರೂ, ತಾಯಿಗರ್ಭದಲ್ಲಿ ಪೂರ್ತಿ ತಯಾರಾದ ಶಿಶು ಶರೀರ ಪ್ರಸವಿಸಲ್ಪಟ್ಟ ನಂತರ ಜೀವಾತ್ಮನು ಸೇರುವುದಕ್ಕೆ ಯೋಗ್ಯವಾಗಿರುವನು. ಆದ್ದರಿಂದ ತಾಯಿಗರ್ಭದಿಂದ ಹುಟ್ಟಿದ ಶಿಶು ಶರೀರ ಹೊಸ ಶರೀರ ಆಗುತ್ತದೆ. ಪ್ರಸವಿಸಿದ ನಂತರ ಜೀವ ಇಲ್ಲದೆ ಖಾಲಿಯಾಗಿರುವ ಶಿಶು ಶರೀರದೊಳಗೆ ಜೀವಾತ್ಮ ಆತ್ಮ ಸೇರಿಕೊಳ್ಳುತ್ತದೆ. ಹಾಗೆ ಜೀವಿಯು ಶಿಶು ಶರೀರದೊಳಗೆ ಸೇರಿಕೊಳ್ಳುವುದನ್ನು ಪುನರ್ಜನ್ಮ ಎನ್ನುತ್ತಿದ್ದೇವೆ. ಪುನರ್ಜನ್ಮ ವಿಷಯವೇ ಮನುಷ್ಯರಿಗೆ ಅರ್ಥವಾಗದೆ ಹೋಗಿದೆ. ಪುನರ್ಜನ್ಮದಲ್ಲಿ ಹುಟ್ಟಿದ ಶಿಶು ಶರೀರ ಹೊಸ ಶರೀರವೆನ್ನುವ ಮಾತು ತಿಳಿಯದೆ ಹೋಗಿದೆ. ತಾಯಿಗರ್ಭದೊಳಗಿನ ಅಸಂಪೂರ್ಣ ಶಿಶು ಶರೀರದೊಳಗೆ ಜೀವಿಯು ಸೇರುತ್ತಿದ್ದಾನೆಂದು ಎಲ್ಲರೂ ಅಂದುಕೊಳ್ಳುವುದೇ ಅಲ್ಲದೆ, ವಿಜ್ಞಾನಿಗಳೆನ್ನುವವರು ಸಹ ಅಂದುಕೊಳ್ಳುತ್ತಿದ್ದಾರೆ. ಮುಖ್ಯವಾಗಿ ಇಲ್ಲಿಯೇ ಎಲ್ಲರೂ ತಪ್ಪಾಗಿ ಅರ್ಥ ಮಾಡಿಕೊಂಡಿದ್ದಾರೆ. ಸೈನ್ಸ್ ಎಂದು

ಹೇಳಿಕೊಳ್ಳುವವರು ಸೈನ್ಸ್‌ನಲ್ಲಿರುವ ನಿಜವನ್ನು ತಿಳಿಯದೆ, ಸೈನ್ಸ್ ಎನ್ನುವ ಹೆಸರು ಹೇಳಿಕೊಳ್ಳುತ್ತಲೇ ಮೂಢನಂಬಿಕೆಯಲ್ಲಿ ಮುಳುಗಿದ್ದಾರೆ. ವಿಜ್ಞಾನದ (ಸೈನ್ಸ್) ಪ್ರಕಾರ ಗರ್ಭದಲ್ಲಿನ ಶಿಶುವಿನೊಳಗೆ ಇಲ್ಲಿಯವರೆಗೂ ಯಾವ ಜೀವಿಯು ಸೇರಿಲ್ಲ. ಹಾಗೆ ಸೇರಿದಂತೆ ಯಾರು ನಿರೂಪಿಸಲಾರರು. ಈ ಮಾತು ಕೇಳಿದಂತಹ ಕೆಲವು ಗೈನಕಾಲಜಿಸ್ಟ್ ಡಾಕ್ಟರುಗಳು ಅಪಹಾಸ್ಯ ಮಾಡಿದ್ದಾರೆ. ವೀರ್ಯ ಕಣದಲ್ಲಿಯೇ ಜೀವವಿದೆಯೆಂದು ಅವರ ನಂಬಿಕೆ. ಆದ್ದರಿಂದ ಅವರು ಹಾಗೆ ಹಾಸ್ಯ ಮಾಡಿದ್ದಾರೆ. ಸೈನ್ಸ್ ಪ್ರಕಾರ ಇನ್ನೂ ಸಂಶೋಧನೆ ನಡೆಯಬೇಕಾಗಿದೆಯೆಂದು, ಇಲ್ಲಿಯವರೆಗೂ ತಮಗೆ ತಿಳಿದಿರುವುದು ಸತ್ಯವಲ್ಲವೆಂದು ಅವರಿಗೆ ತಿಳಿಯದು.

ಈ ವಿಧದಲ್ಲಿ ಭೌತಶಾಸ್ತ್ರಜ್ಞರಿಗೂ ಸಹ ಪುನರ್ಜನ್ಮ ವಿಷಯದಲ್ಲಿ ಜೀವಿಯು ಯಾವಾಗ ಹೊಸ ಶರೀರದಲ್ಲಿ ಪ್ರವೇಶಿಸುತ್ತಾನೋ, ಯಾವುದು ಹೊಸ ಶರೀರವೊ ತಿಳಿಯದಾಗಿದೆ. ಪುನರ್ಜನ್ಮ ವಿಷಯವೇ ತಿಳಿಯದಿರುವಾಗ, ಅದಕ್ಕೆ ಅನುಬಂಧವಾಗಿರುವ ಸಮಾದಿ ಕೂಡಾ ಯಾರಿಗೂ ತಿಳಿಯದಾಗಿದೆ. ಜನ್ಮ ನಂತರವೇ ಸಮಾದಿಯಿರುತ್ತದೆ. ಜನ್ಮವನ್ನು ಅನುಸರಿಸಿ ಸಮಾದಿ ಇರುತ್ತದೆ. ಆದ್ದರಿಂದ ಜನ್ಮ ವಿವರ ತಿಳಿಯದೆ ಸಮಾದಿ ವಿಷಯ ತಿಳಿಯುವುದಕ್ಕೆ ಅವಕಾಶವಿಲ್ಲ. ಇಲ್ಲಿಯವರೆಗೂ ಭೂಮಿಯ ಮೇಲೆ ಜನ್ಮ ವಿಷಯವೇ ರಹಸ್ಯವಾಗಿ ತಿಳಿಯದೆ ಹೋಗಿರುವಾಗ ಜನ್ಮವನ್ನು ಅನುಸರಿಸಿದ ಸಮಾದಿ ಹೇಗೆ ತಿಳಿಯುತ್ತದೆ? ಜನ್ಮ (ಪುನರ್ಜನ್ಮ) ವಿಷಯ ತಿಳಿಯದೆ ಸಮಾದಿ ತಿಳಿಯುವುದಿಲ್ಲ. ಆದರೆ ಭೂಮಿ ಮೇಲೆ ಸಮಾದಿಯ ಒಂದು ಅರ್ಥವಾಗಲಿ, ಸಮಾದಿಯ ನಿಜ ಸ್ಥಿತಿಯಾಗಲಿ ಯಾರಿಗೂ ತಿಳಿಯದೆ ಹೋಗಿದೆ. ತಾಯಿಗರ್ಭದೊಳಗಿನ ಶಿಶುವಿಗೆ ಪ್ರಾಣ ಇಲ್ಲವೆಂದು, ಜೀವಿಯು ಅದರೊಳಗೆ ಪ್ರವೇಶಿಸುವುದಕ್ಕೆ ಅವಕಾಶವಿಲ್ಲವೆಂದು, ಅದು ಅಸಂಪೂರ್ಣ ಶರೀರವೇ ಆಗಲಿ, ಸಂಪೂರ್ಣವಾದ ಹೊಸ ಶರೀರವಲ್ಲವೆಂದು, ಪ್ರಸವಿಸಿದ ಶರೀರವನ್ನೇ ಹೊಸ ಶರೀರವೆನ್ನಬಹುದೆಂದು, ಪ್ರಸವಿಸಿದ ಶಿಶು ಶರೀರದೊಳಗೆ ಜೀವಿಯು

ಸೇರುತ್ತಿದ್ದಾನೆಂದು **"ಜನನ ಮರಣ ಸಿದ್ಧಾಂತ"** ಎನ್ನುವ ಗ್ರಂಥದಲ್ಲಿ 1980ರಲ್ಲಿಯೇ ನಾವು ಬರೆದಿದ್ದೇವೆ. ಬರೆದು 30 ವರ್ಷಗಳಾದರೂ ಅದಕ್ಕಿಂತ ಹತ್ತು ವರ್ಷಗಳ ಮೊದಲಿನಿಂದಲೂ ಈ ವಿಷಯವನ್ನು ಹೇಳಲಾಗಿದೆ. ಇಲ್ಲಿಗೆ 40 ವರ್ಷ ಗಳಿಂದಲೂ ಗರ್ಭಸ್ಥ ಶಿಶುವಿಗೆ ಪ್ರಾಣವಿಲ್ಲವೆಂದು ನಾವು ಹೇಳುತ್ತಾ ಬಂದಿದ್ದೇವೆ. ನಾವು ಹೇಳಿದ ವಿಷಯ ಯಾರೂ ನಂಬುವುದಿಲ್ಲವೆಂದು, ಆ ವಿಧದಲ್ಲಿ ಅವರಲ್ಲಿ ಅಂಧತ್ವ ಕೂಡಿಕೊಂಡಿದೆಯೆಂದು ತಿಳಿದು, ನಾವು ಸತ್ಯವನ್ನು ಹೇಳಬೇಕೆನ್ನುವ ಉದ್ದೇಶದಿಂದ ಶಾಸ್ತ್ರಬದ್ಧವಾಗಿ ಹೇಳಲಾಗಿದೆ. ಭೌತ ಶಾಸ್ತ್ರಜ್ಞ ರೆಂದು ಹೆಸರಿಟ್ಟುಕೊಂಡವರು ಸಹ ಅಶಾಸ್ತ್ರೀಯ ಪದ್ಧತಿಯಲ್ಲಿ ಗರ್ಭ ದಲ್ಲಿಯೇ ಜೀವಾತ್ಮನಿದ್ದಾನೆಂದು ಹೇಳುತ್ತಿದ್ದಾರೆ. ನಾವು ಹೇಳುವ ಮಾತು ಋಜುವಾಗಬಹುದು, ಆದರೆ ಗರ್ಭದಲ್ಲಿ ಪ್ರಾಣವಿದೆಯೆನ್ನುವುದು ಋಜು ವಾಗುವುದಿಲ್ಲ. ಗರ್ಭದಲ್ಲಿ ಶಿಶು ಸಂಗೀತವನ್ನು ಕೇಳುತ್ತಿದೆಯೆಂದು, ಗರ್ಭದೊಳಗಿನ ಶಿಶು ಹೊರಗಿನ ಮಾತುಗಳನ್ನು ಗ್ರಹಿಸುತ್ತದೆಂದು ಕೆಲವರು ಹೇಳಿದ ಮಾತುಗಳು ನೂರಕ್ಕೆ ನೂರು ಪಾಲು ಅಸತ್ಯ. ನಮಗೆ ವಾಸ್ತವವು ತಿಳಿದಿದೆಯಾದ್ದರಿಂದ ಧೈರ್ಯವಾಗಿ ಅವರ ಮಾತನ್ನು ಅಸತ್ಯವೆಂದು ಹೇಳುತ್ತಿದ್ದೇವೆ.

ನಾವು ಹೇಳುವ ವಾಸ್ತವವೇನೆಂದು 40 ವರ್ಷಗಳಿಂದ ಹೇಳುತ್ತಿದ್ದೇವೆ. 30 ವರ್ಷಗಳಿಂದ ಗ್ರಂಥರೂಪದಲ್ಲಿ ಬರೆದಿದ್ದೇವೆ. ನಾವು ಹೇಳಿರುವುದನ್ನು ಅನುಸರಿಸಿ ನೋಡಿದರೆ, ಜೀವಿಯು ಪುನರ್ಜನ್ಮದಲ್ಲಿ ಶರೀರವನ್ನು ಧರಿಸಿದಾಗಲೆ ಸಮಾದಿ ಏರ್ಪಡುತ್ತದೆ. ಹೇಗೆಂದರೆ! ಜೀವಿಯು ಪ್ರಸವಿಸಲ್ಪಟ್ಟ ಹೊಸ ಶರೀರದಲ್ಲಿ ಸೇರಿದಾಗ ಜೀವಿಯು ಶರೀರದೊಳಗೆ ಇದ್ದಾನೆ. ಆ ವಿಧದಲ್ಲಿ ಜನ್ಮದ ಮೊದಲಿಗೇ ಜೀವಿಯು ಶರೀರದಲ್ಲಿ ನಿಕ್ಷಿಪ್ತವಾಗಿರುವುದನ್ನು ಸಮಾಧಿ ಎನ್ನುತ್ತಿದ್ದೇವೆ. ಹಾಗೆ ಸಮಾದಿಯೊಳಗಿರುವ ಜೀವಿಯನ್ನು ಆತನೊಂದಿಗಿರುವ ಆತ್ಮ ಸ್ವತಃವಾಗಿ ಹೊರಗಿನ ಪ್ರಪಂಚದೊಂದಿಗೆ ಸಂಬಂಧವನ್ನು ಏರ್ಪಡಿಸುತ್ತದೆ. ಆ ಸಮಯದಲ್ಲಿ ಶರೀರದೊಳಗಿನ ಬುದ್ಧಿಯಾಗಲಿ, ಮನಸ್ಸಾಗಲಿ ಹೊರಗಿನ ವಿಷಯಗಳನ್ನು

ಗ್ರಹಿಸದ ಸ್ಥಿತಿಯಲ್ಲಿರುತ್ತವೆ. ಜೀವಿಯು ಶರೀರವನ್ನು ಧರಿಸಿದ ಮೊದಲು ಮನಸ್ಸಿನ ಕೆಲಸವನ್ನು, ಬುದ್ಧಿವೊಂದರ ಕೆಲಸವನ್ನು ಸ್ವತಃವಾಗಿ ಆತ್ಮವೇ ಮಾಡುತ್ತದೆ. ಹೊರಗಿನ ಸಂಬಂಧವಿಲ್ಲದೆ ಶರೀರದಲ್ಲಿ ಅಡಗಿರುವ ಜೀವಾತ್ಮನ ಸ್ಥಿತಿಯನ್ನು ಸಮಾದಿ ಎನ್ನಬಹುದು. ಆ ಸ್ಥಿತಿ ಶಿಶುವಾಗಿ ಜನ್ಮಿಸಿದ ಪ್ರತಿ ಜೀವರಾಶಿಗೂ ಇರುವಂತದ್ದೆ. ಆದ್ದರಿಂದ ಅದು ಎಲ್ಲರಿಗೂ ಸಮಾನವಾದದ್ದು, ಆದ್ದರಿಂದ ಅದನ್ನೇ ಸಮಾದಿಯೆಂದು ಪ್ರವಕ್ತರೆಲ್ಲರು ಹೇಳಿದ್ದಾರೆ. ಸಮಾದಿಯಲ್ಲಿ ಪ್ರಪಂಚ ವಿಷಯಗಳು ಯಾವುದೂ ತಿಳಿಯದ ಆದಿ ಕಾಲದಲ್ಲಿ ಆತ್ಮವೇ ಸ್ವತಃವಾಗಿ ಸಮಾದಿಯಿಂದ ಪ್ರಪಂಚದೊಂದಿಗೆ ಸಂಬಂಧವೇರ್ಪಡಿಸುತ್ತದೆ. ಆದರೆ ಕೊನೆಯದಿನದಂದು ಸಮಾದಿಯಿಂದ ಇದೇ ಶರೀರದಿಂದ ಎಬ್ಬಿಸುತ್ತದೆಂದು ಹೇಳಲಾಗಿದೆ. ಅಂತ್ಯಕಾಲ ಅಥವಾ ಪ್ರಳಯ ದಿನದಂದು ಅಂದರೆ ಶರೀರ ನಶಿಸಿ ಮರಣ ಏರ್ಪಟ್ಟ ದಿನವೆಂದು ಅರ್ಥ. ಶರೀರ ನಶಿಸಿ ಪೂರ್ತಿ ಮರಣ ಹೊಂದಿದ ಕ್ಷಣವೇ, ಹೊಸ ಶರೀರದೊಳಗಿಂದ ಜೀವಾತ್ಮನನ್ನು ಹೊರಗಿನ ಪ್ರಪಂಚದೊಳಗೆ ಎಬ್ಬಿಸುವುದು ನಡೆಯುತ್ತಿದೆ. ಆ ರೀತಿ ಪುನರ್ಜನ್ಮ ಹೊಂದಿದ ದಿನ ಎಲ್ಲರಿಗೂ ನಡೆಯುತ್ತಿದೆ. ಆ ರೀತಿ ಎಲ್ಲರಿಗೂ ಸಮಾನವಾಗಿ ನಡೆದ ದಿನದಂದು, ಸಮಾದಿಯಿಂದ (ಶರೀರದಿಂದ) ಎಬ್ಬಿಸಲಾದ ದಿನದಂದು ಯಾರ ಶರೀರದ ಮೇಲೆಯೂ ಬಟ್ಟೆಗಳಿಲ್ಲ. ಬಟ್ಟೆಗಳಿಲ್ಲದೆ ಶರೀರ ಪ್ರಸವಿಸಲ್ಪಡುತ್ತಿದೆಯೆಂದು ಮರೆಯಬಾರದು. ಆ ರೀತಿ ಶರೀರ ಸಮಾದಿಯಿಂದ ದೇವರು ಆತ್ಮದಿಂದ ಎಬ್ಬಿಸಿದ ದಿನದಂದು ಮನುಷ್ಯನಿಗೆ (ಜೀವಾತ್ಮನಿಗೆ) ಯಾವ ಗುಣಗಳೂ ಇಲ್ಲ. ಆಗ ಯಾವ ಗುಣಗಳೂ ಕೆಲಸ ಮಾಡುವುದಿಲ್ಲ. ಜೀವಿಯು ಹೊರಗಿನ ಪ್ರಪಂಚದೊಳಗೆ ಶರೀರದಿಂದ ಎಬ್ಬಿಸುವ ದಿನ, ಯಾವ ಗುಣವಿಲ್ಲದಿರುವುದರಿಂದ ಶರೀರದ ಮೇಲೆ ಬಟ್ಟೆಗಳಿಲ್ಲವೆಂದು ನಾಚಿಕೆಪಡುವುದೂ ಇರುವುದಿಲ್ಲ. ಆ ದಿನ ಅಂತಃಕರಣಗಳಾದ ಮನಸ್ಸು, ಬುದ್ಧಿ, ಚಿತ್ತ, ಅಹಂ ಯಾವುವೂ ಕೆಲಸ ಮಾಡುವುದಿಲ್ಲ. ಹಾಗೆಯೇ ಗುಣಗಳೂ ಕೆಲಸ ಮಾಡುವುದಿಲ್ಲ. ಅವು ಆಗ ಕೆಲಸ ಮಾಡದ ಸ್ಥಿತಿಯಲ್ಲಿರುತ್ತವೆ. ಈ ವಿಷಯ ಎಲ್ಲರಿಗೂ ಪ್ರತ್ಯಕ್ಷ ಪ್ರಮಾಣವಾಗಿ ತಿಳಿದಿದೆ. ಆದರೆ ತಾಯಿಗರ್ಭದಿಂದ ಹುಟ್ಟಿದ ಶಿಶುಶರೀರವೆ

ಸಮಾದಿ ಎಂದಾಗಲಿ, ಆ ಶರೀರದಿಂದಲೇ ಮೊಟ್ಟಮೊದಲು ಪ್ರಪಂಚ ಜ್ಞಾನದೊಳಗೆ ಬರುತ್ತಿದ್ದೇವೆಂದಾಗಲಿ, ಪ್ರಳಯ ದಿನದಂದು ಸಮಾದಿಯಿಂದ ಪ್ರತಿಯೊಬ್ಬರನ್ನು ಎಬ್ಬಿಸುತ್ತೇನೆಂದು, ಇತರೆ ಮತಗಳಲ್ಲಿ ದೇವರು ಹೇಳಿದ ವಾಕ್ಯ ಸತ್ಯವಾದದ್ದೆಂದು ತಿಳಿಯಬೇಕು. ಇದು ನಿತ್ಯವು! ಕಾಣಿಸುವ ಸತ್ಯ! ಅಷ್ಟೇ ಅಲ್ಲದೆ ಪ್ರವಕ್ತರು ಹೇಳಿದ ಪ್ರತಿ ಪದವು ನೆರವೇರುತ್ತಿರುವುದು ಎಲ್ಲರಿಗೂ ತಿಳಿಯುತ್ತಿದೆ. ಎದುರಿಗೆ ನಡೆಯುತ್ತಿದ್ದರೂ ಗುರುತಿಸಲಾಗದವರು ಯಾವಾಗಲೋ ನಡೆಯುತ್ತದೆಂದುಕೊಂಡು ಮೋಸ ಹೋಗುತ್ತಿದ್ದಾರೆ.

ಜನನ ಮರಣಗಳು ಸೃಷ್ಟಿಯ ಆದಿಯಿಂದ ಇದ್ದರೂ, ಅಂದಿನಿಂದ ಇರುವ ಹಿಂದೂ ಮತದಲ್ಲಿ ಗತಕಾಲದಲ್ಲಿದ್ದ ಶ್ರೇಷ್ಠ ಮಹರ್ಷಿಗಳಾಗಲಿ, ಈ ದಿನ ಬಹಳ ಶ್ರೇಷ್ಠ ಸ್ವಾಮೀಜಿಗಳಾಗಿ ಹೆಸರಾಗಿರುವವರಾಗಲಿ, ಜನನ ವಿಷಯವನ್ನೇ ಸರಿಯಾಗಿ ಅರ್ಥ ಮಾಡಿಕೊಳ್ಳದೆ ಹೋಗಿ, ಗರ್ಭದಲ್ಲಿನ ಐದನೇ ತಿಂಗಳ ಶಿಶುವಿಗೆ ಪ್ರಾಣವಿದೆಯೆಂದು, ಗರ್ಭದಲ್ಲಿಯೇ ಎಲ್ಲ ನೆನಪುಗಳಿವೆಯೆಂದು, ಹೊರಗಿನ ವಿಷಯಗಳನ್ನು ಸಹ ಕೇಳುತ್ತದೆಯೆಂದು, ಪ್ರಹ್ಲಾದನು ನಾರದ ಮಹರ್ಷಿ ಹೇಳಿದ ನಾರಾಯಣ ಮಂತ್ರವನ್ನು ಕೇಳಿದ್ದಾನೆಂದು, ಹಾಗೆಯೇ ಅರ್ಜುನನು, ಆತನ ಹೆಂಡತಿ ಸುಭದ್ರ ಮಾತನಾಡುತ್ತಿರುವಾಗ, ಗರ್ಭದೊಳಗಿನ ಅಭಿಮನ್ಯು ಯುದ್ಧತಂತ್ರಗಳನ್ನು ಕೇಳಿದ್ದಾನೆಂದು ಹೇಳುವುದು ತಿಳಿದ ವಿಷಯವೇ. ಈ ರೀತಿ ಮೊದಲೇ ಜನರಲ್ಲಿ ಜನನ ಮರಣಗಳನ್ನು ಕುರಿತಾದ ಧರ್ಮವು ಅಧರ್ಮವಾಗಿ ಪ್ರಚಾರವಾಗಿದೆ. ಅಧರ್ಮವಾಗಿರುವ ಧರ್ಮವು ಮತ್ತೆ ಧರ್ಮವಾಗಿ ಪ್ರಚಾರವಾಗುವುದು ಬಹಳ ಕಷ್ಟವಾದ ಕೆಲಸವಾಗುತ್ತದೆ. ಅಧರ್ಮವು ಜನರಿಗೆ ಸುಲಭವಾಗಿ ಅರ್ಥವಾಗುತ್ತದೆ. ಅದನ್ನೇ ಧರ್ಮವಾಗಿ ಹೇಳಬೇಕಾದಾಗ ಕೇಳುವವರಲ್ಲಿ ಮಾಯೆ ಅಗತ್ಯವಿಲ್ಲದ ಪ್ರಶ್ನೆಗಳನ್ನು, ಅನುಮಾನಗಳನ್ನು ಸೃಷ್ಟಿಸುತ್ತದೆ. ಹೇಳುತ್ತಿರುವ ವಿಷಯ ಸತ್ಯವಾದರೂ, ಅದು ಅಸತ್ಯವಾಗಿ ಕಾಣಿಸುವಂತೆ ಮಾಡುತ್ತದೆ. ಜನನ ವಿಷಯದಲ್ಲಿ ಪ್ರಸವಿಸಲ್ಪಟ್ಟ ಶಿಶುವಿನ ಶರೀರದೊಳಗೆ ಜೀವಾತ್ಮ ಸೇರುತ್ತಾ

ನೆನ್ನುವುದು ಸತ್ಯ, ಧರ್ಮ, ಪ್ರತ್ಯಕ್ಷ ಪ್ರಮಾಣವಾದರೂ, ಅದು ಎಲ್ಲ ವಿಧಗಳಲ್ಲಿ ಶಾಸ್ತ್ರಬದ್ಧವಾಗಿದ್ದರೂ, ಅದನ್ನು ಮನುಷ್ಯರು ನಂಬಶಕ್ಯವಲ್ಲವೆಂದು ಭಾವಿಸಿಕೊಳ್ಳುವರು. ಅದನ್ನು ಕುರಿತು ಯಾವ ರೀತಿಯ ವಿಚಕ್ಷಣಾಬುದ್ಧಿಯನ್ನು ಉಪಯೋಗಿಸುವುದಿಲ್ಲ. ಅದೇ ವಿಷಯವನ್ನು ಅಧರ್ಮವಾಗಿ ಹೇಳಿದರೆ, ಅದು ಯಾವುದೇ ರೀತಿಯ ಸತ್ಯವಾಗದಿದ್ದರೂ, ಪ್ರತ್ಯಕ್ಷ ಪ್ರಮಾಣವಾಗದಿದ್ದರೂ ಅದನ್ನು ಸುಲಭವಾಗಿ ನಂಬುತ್ತಾರೆ. ಕರ್ಣನು ಕಿವಿಯಲ್ಲಿ ಹುಟ್ಟಿದ್ದಾನೆಂದರೂ, ದ್ರೋಣನು ಸೋರೆಯಲ್ಲಿ ಹುಟ್ಟಿದ್ದಾನೆಂದರೂ ಅದನ್ನು ಸುಲಭವಾಗಿ ನಂಬುತ್ತಾರೆ. ಅವು ಧರ್ಮವಿರುದ್ಧವಾದ ಮಾತುಗಳೆಂದು ಯಾರೂ ಅಂದುಕೊಳ್ಳುವುದಿಲ್ಲ. ಆ ವಿಷಯದಲ್ಲಿ ಎಂತಹ ಅನುಮಾನಗಳೂ ಬರುವುದಿಲ್ಲ. ಅದೇ ಜನ್ಮ ವಿಷಯವನ್ನು ಧರ್ಮಯುಕ್ತವಾಗಿ ಶಿಶು ತಾಯಿ ಗರ್ಭದಿಂದ ಹೊರಬಿದ್ದ ನಂತರ ಜೀವಾತ್ಮನಿಗೆ ಜನ್ಮ ಕಲುಗುತ್ತಿದೆಯೆಂದು ಹೇಳಿದರೆ, ಅದು ನೂರುಪಾಲು ಸತ್ಯವಾಗಿದ್ದರೂ, ಮನುಷ್ಯ ವಿಜ್ಞಾನವಂತನಾದರೂ ನಂಬದೆ ಹೋಗುತ್ತಿದ್ದಾರೆ. ಅನವಶ್ಯವಾದ ಅನುಮಾನಗಳಿಂದ ಸತ್ಯಕ್ಕೆ ದೂರವಾಗಿ ಹೋಗುತ್ತಿದ್ದಾರೆ. ಪೂರ್ತಿ ವಿಚಕ್ಷಣಾದೃಷ್ಟಿಯಿಂದ ನೋಡದೆ ಒಂದು ನಿರ್ಣಯಕ್ಕೆ ಬಂದು ಸತ್ಯವನ್ನು ಅಸತ್ಯವೆಂದುಕೊಳ್ಳುತ್ತಿದ್ದಾರೆ. ಇದು ಹಿಂದೂ ಮತದಲ್ಲಿನ ಅಧರ್ಮವಾದರೆ, ಇತರ ಮತಗಳಲ್ಲಿಯೂ ಮಾಯೆ ಅಥವಾ ಸಾತಾನ್ (ಸೈತಾನ್) ಎನ್ನುವುದು ಪ್ರವಕ್ತರು ಹೇಳಿದ ದೇವರ ಧರ್ಮಗಳನ್ನು ಪ್ರಜೆಗಳಿಗೆ ಅಧರ್ಮಗಳಾಗಿ ಅರ್ಥವಾಗುವ ಹಾಗೆ ಮಾಡಿದೆ. ದೇವರ ಜ್ಞಾನವನ್ನು ಪೂರ್ತಿಯಾಗಿ ಅರ್ಥವಾಗದ ಹಾಗೆ ಮಾಡಿ ಅಜ್ಞಾನಿಗಳಾಗಿ ಇರುವಂತೆ ಮಾಡಿದೆ.

ಹಿಂದೂ ಮತವೊಂದರಲ್ಲಿಯೇ ಅಲ್ಲದೆ ಇತರೆ ಮತಗಳಲ್ಲಿನ ಮನುಷ್ಯರನ್ನು ಸಹ ದೇವರೆಡೆ ಹೋಗದಂತೆ, ದೇವರ ಜ್ಞಾನ ಅರ್ಥವಾಗದಂತೆ ಮಾಡುವುದರಲ್ಲಿ ನಿರಂತರ ಮಾಯೆ ಕೆಲಸ ಮಾಡುತ್ತಲೇ ಇದೆಯೆಂದು ಹೇಳುವುದಕ್ಕೆ ಹಲವು ಆಧಾರಗಳಿವೆ. ಪವಿತ್ರ ಖುರಾನ್ ಗ್ರಂಥದಲ್ಲಿ ಮಕ್ಕಾದಲ್ಲಿ ಅವತರಿಸಿದ **“ಅಬಸ”** ಎನ್ನುವ ಸುರಾದಲ್ಲಿ (ಅಧ್ಯಾಯದಲ್ಲಿ) 37ನೇ ಆಯತ್‌ನಲ್ಲಿ

(ವಾಕ್ಯದಲ್ಲಿ) ಹೀಗಿದೆ. "ಆ ದಿನ ಆಸನ್ನವಾದಾಗ ಪ್ರತಿಯೊಬ್ಬರಿಗೂ ತನ್ನ ಮೇಲೆ ಪ್ರಜ್ಞೆ ಬಿಟ್ಟರೆ ಯಾರ ಮೇಲೆಯೂ ಪ್ರಜ್ಞೆ ಇರದು". ಈ ವಾಕ್ಯವನ್ನು ಅನುಸರಿಸಿ ಹದೀಸುನಲ್ಲಿ ವಿಭಿನ್ನ ಕ್ರಮಗಳಿಂದ, ಪ್ರಮಾಣಗಳಿಂದ ತಿಳಿದ ಒಂದು ಉಲ್ಲೇಖ ಕಂಡುಬರುತ್ತದೆ. ಅದರಲ್ಲಿ ಪ್ರವಕ್ತ ಮಹನೀಯರು (ಸ) "ಪ್ರಳಯದಿನದಂದು ಎಲ್ಲರೂ ಒಂದು ನೂಲಿನ ಎಳೆಯಷ್ಟು ಬಟ್ಟೆಗಳಿಲ್ಲದೆ ನಗ್ನವಾಗಿ ಎಬ್ಬಿಸಲ್ಪಡುತ್ತಾರೆ" ಎಂದು ಹೇಳಿದಾಗ ಆತನ ಸತೀಮಣಿಯರಲ್ಲಿ ಒಬ್ಬರು ಬಹುಶಃ ನಾಲ್ಕನೇ ಹೆಂಡತಿಯಾದ ಹಜ್ರತ್ ಅಯಿಷಾ ಗಾಬರಿಯಾಗಿ **"ದೈವ ಪ್ರವಕ್ತಾ! ಆ ದಿನ ನಮ್ಮ ಗೋಪ್ಯವಾದ ಅವಯವಗಳು ಎಲ್ಲರ ಮುಂದೆ ಪ್ರಕಟವಾಗುತ್ತವೆಯೆ"**? ಎಂದು ಪ್ರಶ್ನಿಸಿದ್ದಾರೆ. ಆಗ ದೈವ ಸಂದೇಶಕರು (ಸ) ಈ 37ನೇ ಆಯತ್ತನ್ನೇ ಪಠಿಸಿ **"ಆ ದಿನ ಯಾರಿಗೂ ಮತ್ತೊಂದು ಕಡೆ ನೋಡುವ ಅರಿವು ಇರುವುದಿಲ್ಲ"** ಎಂದು ಹೇಳಿದ್ದಾರೆ. ದೈವಸಂದೇಶವನ್ನು ತಿಳಿಸಿದ ಮಹಮ್ಮದ್ ಪ್ರವಕ್ತರು ಹೇಳಿದ ಮೇಲಿನ ವಾಕ್ಯವನ್ನು ಬಿಡಿಸಿ ನೋಡಿಕೊಂಡರೂ ಈ ರೀತಿ ಅರ್ಥವಾಗಬಹುದು. ಪ್ರಳಯ ದಿನ ಅನ್ನುವುದರಲ್ಲಿ **ಪ್ರ** ಎಂದರೆ ಹುಟ್ಟಿರುವುದು ಎಂದು ಅರ್ಥ. ಹಾಗೆ ಪ್ರಳಯವೆಂದರೆ ನಾಶ ಎಂದು ಅರ್ಥ. ಒಟ್ಟಿನಲ್ಲಿ ಪ್ರಳಯ ಅಂದರೆ ಹುಟ್ಟಿರುವುದು ನಾಶವಾಗುವುದು ಎಂದು ತಿಳಿಯುತ್ತದೆ. ಹುಟ್ಟಿರುವುದು ನಾಶವಾಗುವುದು ಎಂದು ತಿಳಿದಾಗ ಹುಟ್ಟಿರುವುದು ಏನು ಎಂಬ ಪ್ರಶ್ನೆ ಬರಬಹುದು.

ಆ ಪ್ರಶ್ನೆಗೆ ಎರಡು ಉತ್ತರಗಳಿವೆ. ಒಂದು ಸೃಷ್ಠಿಯ ಆದಿಯಲ್ಲಿ ಸೃಷ್ಠಿಕರ್ತನಾದ ದೇವರು ಪಂಚಭೂತಗಳಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎನ್ನುವ ಐದು ಪ್ರಕೃತಿ ಭಾಗಗಳನ್ನು ಸೃಷ್ಠಿಸಿದ್ದಾನೆ. ಎರಡನೆಯದು, ಜೀವದಿಂದ ಕೂಡಿಕೊಂಡಿರುವ ಶರೀರವನ್ನು ಧರಿಸಿದ ಜೀವರಾಶಿಗಳನ್ನು ಸಹ ಸೃಷ್ಟಿಸಿದ್ದಾನೆ ಒಂದು ಬದಲಾವಣೆಯಾಗದ ಪ್ರಕೃತಿಯೆಂದು ಎರಡನೆಯದು ಬದಲಾವಣೆಯಾಗುವ ಪ್ರಕೃತಿ ಎಂದು ಹೇಳಲಾಗುತ್ತಿದೆ. ಇವುಗಳನ್ನೇ ಚರಾಚರ ಪ್ರಕೃತಿ ಎಂದು ಅನ್ನುತ್ತಿದ್ದಾರೆ. ಪಂಚಭೂತಗಳು ಬದಲಾವಣೆಯಾಗದ

ಪ್ರಕೃತಿಯೆಂದು, ಜೀವರಾಶಿಗಳು ಬದಲಾವಣೆ ಹೊಂದುವ ಪ್ರಕೃತಿಯೆಂದು ಹೇಳಲಾಗಿದೆ. ಇದರಿಂದ ದೈವಸೃಷ್ಠಿ ಎರಡು ವಿಧಗಳೆಂದು, ಒಂದು ಜೀವರಾಶಿಗಳು ಇಲ್ಲದ ಪ್ರಪಂಚವೆಂದು, ಎರಡನೆಯದು ಜೀವಗಳಿರುವ ಶರೀರಗಳೆಂದು ತಿಳಿಯುತ್ತಿದೆ. ಸೃಷ್ಠಿಸಲ್ಪಟ್ಟಿರುವುವು ಜೀವವಿರುವ ಮತ್ತು ಜೀವವಿಲ್ಲದ ಎರಡು ವಿಧಗಳ ಪ್ರಕೃತಿಗಳಾದರೆ, ಅವು ನಾಶ ಹೊಂದುವುದು ಸಹ (ಅವುಗಳ ಪ್ರಳಯಗಳು ಸಹ) ಎರಡು ವಿಧಗಳಲ್ಲಿ ಇವೆ. ಎರಡು ವಿಧಗಳ ಪ್ರಳಯಗಳನ್ನು ತಿಳಿದುಕೊಳ್ಳುವ ಮೊದಲು ಎರಡು ವಿಧಗಳ ಪ್ರಭವಗಳನ್ನು (ಹುಟ್ಟುವುದನ್ನು) ಸಹ ವಿವರವಾಗಿ ತಿಳಿದಿರಬೇಕು.

ಕಾಣಿಸುವ ವಿಶ್ವವನ್ನು ಎರಡಾಗಿ ವಿಭಜಿಸಬಹುದು. ಅವುಗಳೇ ಚರಾಚರ ಪ್ರಕೃತಿಗಳೆಂದು ತಿಳಿದುಬರುತ್ತವೆ. ಒಂದು, ಜೀವವಿಲ್ಲದ ಪ್ರಕೃತಿ ಭಾಗಗಳಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ. ಎರಡನೆಯದು ಈ ಐದು ಮೂಲ ಪದಾರ್ಥಗಳಿಂದ ತಯಾರಾದ ಜೀವವಿರುವ ಶರೀರಗಳು. ಜೀವವಿಲ್ಲದ ಪ್ರಕೃತಿ ಮತ್ತು ಜೀವವಿರುವ ಪ್ರಕೃತಿ ಎರಡೂ ಆದಿಯಲ್ಲಿಯೇ ದೇವರಿಂದ ಸೃಷ್ಠಿಸಲ್ಪಟ್ಟಿವೆ. ಈ ಎರಡಕ್ಕೂ ಸೃಷ್ಠಿಕರ್ತ ದೇವರೆ. ಇದರಲ್ಲಿ ಜೀವವಿಲ್ಲದ ಪ್ರಕೃತಿ ಒಂದು ಬಾರಿಯೇ ಸೃಷ್ಠಿಸಲ್ಪಡುತ್ತದೆ. ಒಂದೇ ಬಾರಿ ಪ್ರಳಯ ಹೊಂದುತ್ತಿದೆ. ಎರಡನೆಯದಾದ ಜೀವವಿರುವ ಪ್ರಕೃತಿ ಕ್ರಮಬದ್ದವಾಗಿ ಕರ್ಮವನ್ನನುಸರಿಸಿ ಹಲವು ಬಾರಿ ಹುಟ್ಟುತ್ತದೆ. ಮತ್ತು ಹಲವು ಬಾರಿ ಪ್ರಳಯ ಹೊಂದುತ್ತದೆ. ಕಾಣಿಸುವ ವಿಶ್ವದಲ್ಲಿ ಪ್ರತ್ಯಕ್ಷವಾಗಿ ಜೀವವಿರುವ ಪ್ರಕೃತಿ ಅನೇಕ ಬಾರಿ ನಾಶ (ಪ್ರಳಯವನ್ನು) ಹೊಂದುತ್ತಿದೆ, ಹಾಗೆ ಅನೇಕ ಬಾರಿ ಸೃಷ್ಠಿಸಲ್ಪಡುತ್ತದೆ. ಜೀವವಿಲ್ಲದ ಪ್ರಕೃತಿ ಮಾತ್ರ ಸೃಷ್ಠಿಯ ಆದಿಯಲ್ಲಿಯೇ ಒಂದೇ ಬಾರಿ ಸೃಷ್ಠಿಸಲ್ಪಟ್ಟು, ಸಾವಿರ ಯುಗಗಳ ಅನಂತರ ಒಂದೇ ಬಾರಿ ಪ್ರಳಯವನ್ನು ಹೊಂದುತ್ತಿದೆ. ಆದರೆ ಜೀವವಿರುವ ಪ್ರಕೃತಿ ನಿತ್ಯವೂ ಸೃಷ್ಠಿಸಲ್ಪಡುತ್ತದೆ. ನಿತ್ಯವೂ ನಾಶವನ್ನು (ಪ್ರಳಯವನ್ನು) ಹೊಂದುವುದು ನಡೆಯುತ್ತಿದೆ. ಇದರಿಂದ ಸೃಷ್ಠಿ ಎರಡು ವಿಧಗಳೆಂದು, ಪ್ರಳಯಗಳು ಸಹ ಎರಡು ವಿಧಗಳೆಂದು, ಎಲ್ಲದಕ್ಕೂ ಆದಿಕರ್ತ

ದೇವರೊಬ್ಬನೇ ಎಂದು ತಿಳಿಯುತ್ತದೆ. ಈಗ ವಾಸ್ತವ ವಿಷಯಕ್ಕೆ ಬರೋಣ. ದೈವಸಂದೇಶಕಾರರಾದ ಹಜ್ರತ್ ಮಹಮ್ಮದ್ ಪ್ರವಕ್ತ (ಸ) ರವರು ದಿವ್ಯಖುರಾನ್‌ನಲ್ಲಿ ಅಬಸ ಎನ್ನುವ 80ನೇ ಸುರಾದಲ್ಲಿ 37ನೇ ಆಯತ್‌ನಲ್ಲಿ ತಿಳಿಸಿದ ವಾಕ್ಯದಲ್ಲಿ "ಪ್ರಳಯದಿನದಂದು ಎಲ್ಲರೂ" ಎನ್ನುವುದರಿಂದ ಮನುಷ್ಯರೆಲ್ಲರಿಗೂ ಎಂದು ಅರ್ಥವಾಗುತ್ತದೆ. ಮನುಷ್ಯರೆಲ್ಲರೂ ಜೀವವಿರುವ ಪ್ರಕೃತಿಯಲ್ಲಿನ ಭಾಗವಾದ್ದರಿಂದ ಅಬಸ ಸುರಾದಲ್ಲಿ 37ನೇ ಆಯತ್‌ನಲ್ಲಿ ಹೇಳಿರುವುದು ಮನುಷ್ಯರಿಗೆ ಸಂಬಂಧಿಸಿದ ಪ್ರಳಯವನ್ನು ಕುರಿತು ಮಾತ್ರವೇ ಎಂದು ತಿಳಿಯುತ್ತಿದೆ.

ದೇವರಿಂದ ಸೃಷ್ಟಿಸಲ್ಪಟ್ಟ ಪ್ರಕೃತಿ ಎರಡು ವಿಧಗಳೆಂದು ತಿಳಿಯದೆ ಹೋದರೆ ಎಲ್ಲರಿಗೂ ಸಾವಿರಯುಗಗಳ ನಂತರ ನಡೆಯುವ ವಿಶ್ವಪ್ರಳಯ ಮಾತ್ರವೇ ತಿಳಿಯುವುದು. ಮನುಷ್ಯನ ಜೀವನವೊಂದು ಅಂತ್ಯಕಾಲದಲ್ಲಿ ನಡೆಯುವ ಮರಣವೆನ್ನುವ ಪ್ರಳಯ ತಿಳಿಯದೆ ಹೋಗುವುದು. ಮನುಷ್ಯನಿಗೆ ಕೆಲವು ದಶಕಗಳಿಗೊಂದು ಬಾರಿ ನಡೆಯುವ ಶರೀರ ಮರಣ ಎನ್ನುವುದು ಸಹ ಚರ ಪ್ರಕೃತಿಗೆ ಸಂಭವಿಸುವ ಪ್ರಳಯವೆಂದು, ಅಂತಹ ಪ್ರಳಯವನ್ನು ಮನುಷ್ಯರು ಅವರವರ ಜೀವನದಲ್ಲಿ ಅನೇಕ ಬಾರಿ ಹೊಂದುತ್ತಿದ್ದಾರೆಂದು ಹೇಳಬಹುದು. ಮನುಷ್ಯ ಸತ್ತುಹೋದ ಪ್ರತಿಸಾರಿ ಆತನು ಸಮಾಧಿ ಹೊಂದುತ್ತಿದ್ದಾನೆಂದು, ಮತ್ತೆ ಸಮಾಧಿಯಿಂದ ಏಳಲ್ಪಡುತ್ತಾನೆಂದು, ಮಕ್ಕಾದಲ್ಲಿ ಹುಟ್ಟಿದ "ಅಲ್ ಇನ್‌ಫಿತಾರ್" ಎನ್ನುವ 82ನೇ ಸುರಾದಲ್ಲಿ 4ನೇ ಆಯತ್‌ನಲ್ಲಿ "ಸಮಾದಿಗಳನ್ನು ತೆರೆಯಲ್ಪಡುವಾಗ" ಎಂದು ಬರೆಯಲಾದ ವಾಕ್ಯಕ್ಕೆ ವಿವರ ಖುರಾನ್ ಅರಿವು ಗ್ರಂಥದಲ್ಲಿ ಹೀಗೆ ಬರೆಯಲಾಗಿದೆ. ಸಮಾಧಿಗಳು ತೆರೆದುಕೊಳ್ಳುವುದು ಎಂದರೆ ಮನುಷ್ಯರು ಮತ್ತೆ ಬದುಕುವುದು ಎಂದರ್ಥ. ಇಸ್ಲಾಮ್ ಪಂಡಿತರು ಬರೆದ ವಾಕ್ಯಗಳನ್ನು ಅನುಸರಿಸಿದರೆ ಪವಿತ್ರ ಖುರಾನ್‌ನಲ್ಲಿ ಹಜ್ರತ್ ಮಹಮ್ಮದ್ (ಸ) ಪ್ರವಕ್ತ ಹೇಳಿರುವುದನ್ನು ಅನುಸರಿಸಿದರೆ ಪ್ರಳಯ ಎಂದರೆ ವಿಶ್ವವೆಲ್ಲದಕ್ಕೂ ಸಂಭವಿಸುವ ಪ್ರಳಯವಲ್ಲವೆಂದು, ಮನುಷ್ಯರಿಗೆ

ಸಂಭವಿಸುವ ಜೀವನ ಅಂತ್ಯ ಕಾಲವಾದ ಮರಣವೆಂದು ತಿಳಿಯುತ್ತದೆ. ದೇವರಿಂದ ಸೃಷ್ಠಿಸಲ್ಪಟ್ಟ ಚರ ಪ್ರಕೃತಿ, ಅಚರ ಪ್ರಕೃತಿ ಅನ್ನುವ ಎರಡು ಪ್ರಕೃತಿಗಳಲ್ಲಿ ಕೇವಲ ಚರ ಪ್ರಕೃತಿಯಾದ ಮನುಷ್ಯರಿಗೆ ಸಂಬಂಧಿಸಿದ ಪ್ರಳಯವನ್ನು ಕುರಿತು ದೇವರು ಹೇಳಿದ್ದಾನೆಂದು, ಹಾಗೆ ಮನುಷ್ಯರಿಗೆ ಸಂಬಂಧಿಸಿದ ಪ್ರಳಯವನ್ನು ಹೊಂದಿದ ನಂತರವೇ ಮನುಷ್ಯ ಸಮಾಧಿಯನ್ನು ಹೊಂದುತ್ತಿದ್ದಾನೆಂದು ಅರ್ಥವಾಗುತ್ತದೆ.

ಚರಾ ಪ್ರಕೃತಿಯಾದ ಮನುಷ್ಯರ ಮರಣಕ್ಕೆ ಸಂಬಂಧಿಸಿದ ಪ್ರಳಯವೆಂದುಕೊಳ್ಳದೆ, ವಿಶ್ವ ಅಂತ್ಯದಲ್ಲಿ ನಡೆಯುವ ಅಚರ ಪ್ರಕೃತಿಗೆ ಸಂಬಂಧಿಸಿದ ಪ್ರಳಯವೆಂದು ಅರ್ಥ ಮಾಡಿಕೊಂಡರೆ, ಆ ಪ್ರಳಯದ ನಂತರ ಸಮಾದಿಗಳಾಗಲಿ, ಅವುಗಳಿಂದ ಎಬ್ಬಿಸುವುದಾಗಲಿ ಇರುವುದಿಲ್ಲ. ಏಕೆಂದರೆ! ಅಚರ ಪ್ರಕೃತಿಗೆ ಸಂಭವಿಸುವ ಪ್ರಳಯವು ವಿಶ್ವಪ್ರಳಯವಾಗುತ್ತದೆ. ವಿಶ್ವಪ್ರಳಯದ ನಂತರ ಒಟ್ಟು ಪ್ರಪಂಚವೇ ಇರುವುದಿಲ್ಲ. ವಿಶ್ವಪ್ರಳಯದ ನಂತರ ಈಗಿರುವುದೇನೂ ಇರುವುದಿಲ್ಲ. ಅಚರ ಪ್ರಕೃತಿಯಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಇಲ್ಲದೆ ಹೋದಾಗ, ಸರ್ವಸೃಷ್ಠಿ ಅಂತ್ಯವಾಗಿ ಹೋದಾಗ, ದೇವರು ಬಿಟ್ಟು ಏನೂ ಉಳಿಯದಿರುವಾಗ ಜೀವರಾಶಿಗಳ ಇರುವಿಕೆಯಾಗಲಿ, ಅವುಗಳ ಸಮಾದಿಗಳಾಗಲಿ, ಮತ್ತೆ ಅವರು ಬದುಕುವುದಾಗಲಿ, ಸ್ವರ್ಗವಾಗಲಿ, ನರಕವಾಗಲಿ ಇರುವುದಿಲ್ಲ. ಆದ್ದರಿಂದ ಮೂಲಗ್ರಂಥವಾದ ಖುರಾನ್‌ನಲ್ಲಿ ಹೇಳಿರುವುದು ಮನುಷ್ಯರಿಗೆ ಸಂಬಂಧಿಸಿದ ಪ್ರಳಯವೆಂದು ಗ್ರಹಿಸಿಕೊಳ್ಳಬೇಕು. ಮನುಷ್ಯರ ಅಂತ್ಯಕಾಲಕ್ಕೆ ಸಂಬಂಧಿಸಿದ ಪ್ರಳಯವೆಂದು ಅರ್ಥ ಮಾಡಿ ಕೊಳ್ಳಬೇಕಾಗಲಿ, ಪಂಚಭೂತಗಳಿಗೆ ಸಂಬಂಧಿಸಿದ ಪ್ರಳಯವೆಂದು ಅರ್ಥ ಮಾಡಿಕೊಳ್ಳಬಾರದು. ಮನುಷ್ಯರಿಗೆ ಸಂಬಂಧಿಸಿದ ಪ್ರಳಯದಲ್ಲಿ, ಜೀವಾತ್ಮನು ಶಿಶು ಶರೀರವನ್ನು ಸಮಾಧಿಯಾಗಿ ಹೊಂದಬಹುದು. ಆ ಸಮಾಧಿಯಿಂದ ಏಳಲ್ಪಡಬಹುದು. ಆದರೆ ವಿಶ್ವಪ್ರಳಯದಲ್ಲಿ ದೇವರು ಬಿಟ್ಟು ಏನೂ ಉಳಿಯದಿರುವಾಗ, ಜೀವಾತ್ಮನ ಇರುವಿಕೆ ತಿಳಿಯದೆ ಹೋಗಿ, ಶರೀರಗಳಾಗಲಿ

(ಸಮಾದಿಗಳಾಗಲಿ) ಜೀವಾತ್ಮನಾಗಲಿ ಇಲ್ಲದಿರುವಾಗ ಅಂತಹ ಪ್ರಳಯವನ್ನು ಕುರಿತು ಪ್ರಸ್ತಾವಿಸಬೇಕಾದ ಅಗತ್ಯವೇ ಇಲ್ಲ. ಆದ್ದರಿಂದ ಹಿರಿಯರು ಹೇಳಿರುವುದು ಮನುಷ್ಯರಿಗೆ ಸಂಬಂಧಿಸಿದ ಪ್ರಳಯವೆಂದು ಗ್ರಹಿಸಬೇಕು. ಈಗ ಖುರಾನ್ ಗ್ರಂಥದಲ್ಲಿ 80ನೇ ಅಧ್ಯಾಯದಲ್ಲಿ ಅಬಸ ಸುರಾದಲ್ಲಿ 37ನೇ ಆಯತ್‌ನಲ್ಲಿ ಹೇಳಿದಂತೆ ಪ್ರಳಯದಿನ ಅರ್ಥವಾಗಿದೆ ಎಂದುಕೊಳ್ಳುತ್ತೇನೆ. ಇನ್ನು 82 ಸುರಾ ಆದ ಆಲ್ ಇನ್‌ಫಿತಾರ್‌ನಲ್ಲಿ 4ನೇ ಆಯತ್‌ನಲ್ಲಿ "ಸಮಾಧಿಗಳು ತೆರೆಯಲ್ಪಟ್ಟಾಗ" ಅಂದರೆ ಮನುಷ್ಯರು ಮತ್ತೆ ಬದುಕುವುದು ಎಂದು ಖುರಾನ್ ಅರಿವು ಗ್ರಂಥದಲ್ಲಿ ಹೇಳಲಾಗಿದೆ. ವಾಸ್ತವವಾಗಿ ಸಮಾಧಿ ತೆರೆದಾಗಲೇ ಮನುಷ್ಯ ಮತ್ತೆ ಬದುಕುತ್ತಿದ್ದಾನೆಂದು ಅಥವಾ ಸಮಾಧಿಯಿಂದ ಹೊರಗೆ ಬಂದಾಗಲೆ ಮನುಷ್ಯ ಮತ್ತೆ ಹುಟ್ಟುತ್ತಿದ್ದಾನೆಂದು ನಾವು ಸಹ ಹೇಳುತ್ತಿದ್ದೇವೆ.

ಇಲ್ಲಿ ನಾವು ಚೆನ್ನಾಗಿ ಅರ್ಥ ಮಾಡಿಕೊಳ್ಳಬೇಕಾಗಿರುವುದೇನೆಂದರೆ! ಸುರಾನಲ್ಲಿ ನಾಲ್ಕನೇ ಆಯತ್ ಹೇಳದ ಮುನ್ನ ಒಂದು, ಎರಡು, ಮೂರು ಆಯತ್‌ಗಳು ಹೀಗಿವೆ. 1) ಆಕಾಶ ಸೀಳಿ ಹೋದಾಗ 2) ನಕ್ಷತ್ರಗಳು ಚದುರಿ ಹೋದಾಗ 3) ಸಮುದ್ರಗಳು ಭೇದಿಸಲ್ಪಟ್ಟಾಗ ಎಂದು ಮೂರು ವಾಕ್ಯಗಳು ಇವೆ. ಈ ಮೂರು ಆಯತ್‌ಗಳಲ್ಲಿ (ವಾಕ್ಯಗಳಲ್ಲಿ) ಹೇಳಿರುವುದು ಪ್ರಳಯವನ್ನು ಕುರಿತೇ ಆದರೂ ಅದು ಪಂಚಭೂತಗಳಿಗೆ ಸಂಬಂಧಿಸಿದ ಪ್ರಳಯವಲ್ಲ. ಕೇವಲ ಪಂಚಭೂತಗಳಿಂದ ಹುಟ್ಟಿದ ಜೀವರಾಶಿಗಳ ಶರೀರಗಳಿಗೆ ಸಂಬಂಧಿಸಿದ ಪ್ರಳಯವೆಂದು ತಿಳಿಯುತ್ತಿದೆ. ಅದು ಪಂಚಭೂತಗಳಿಗೆ ಸಂಬಂಧಿಸಿದ ಪ್ರಳಯವೇ ಆಗಿದ್ದರೆ ಆಕಾಶವೇ ಇಲ್ಲದಾಗುತ್ತಿತ್ತು. ಆಕಾಶವೇ ಇಲ್ಲದಾದಾಗ ನಕ್ಷತ್ರ ಚದುರಿ ಹೋಗುವುದಂತೂ ಇರುವುದಿಲ್ಲ. ಕೊನೆಯ ಪ್ರಳಯದಲ್ಲಿ ಆಕಾಶವೂ ಇರುವುದಿಲ್ಲ, ನಕ್ಷತ್ರಗಳೂ ಇರುವುದಿಲ್ಲ. ಪಂಚಭೂತಗಳಿಗೆ ಪ್ರಳಯವಾದರೆ, ಪಂಚಭೂತಗಳಲ್ಲಿ ಒಂದಾದ ಸಮುದ್ರದ ಇರುವಿಕೆಯೇ ಇಲ್ಲದಾಗುತ್ತದೆ, ಆದರೆ ಸಮುದ್ರ ಸೀಳುವುದಿಲ್ಲ. ಸಮುದ್ರ ಸೀಳಿದೆಯೆಂದರೆ ಕೆಲವು ಖಂಡಗಳಾಗಿ ಮಾಡಲಾಗಿದೆಯೆಂದರ್ಥ. ಅಲ್ಲಿಗೆ ಸಮುದ್ರ ಇದ್ದಹಾಗೆ ಅಲ್ಲವೆ! ಅದೇ ರೀತಿ

ಆಕಾಶವು ಸೀಳಿಹೋಗಿದೆ, ಆದರೆ ಒಟ್ಟಾರೆ ಇಲ್ಲದಂತಾಗಿಲ್ಲ ಅಲ್ಲವೆ! ಇದರಿಂದ ಅಲ್ಲಿ ಹೇಳಿದ ಪ್ರಳಯ ಪಂಚಭೂತಗಳಾದ ಪ್ರಪಂಚಕ್ಕೆ ಅಲ್ಲವೆಂದು, ಅದು ಪಂಚಭೂತಗಳಿಂದ ಹುಟ್ಟಿರುವ ಶರೀರಗಳು ನಾಶವಾಗುವುದಕ್ಕೆ ಏರ್ಪಟ್ಟ ಪ್ರಳಯವೆಂದು ಹೇಳಬಹುದು. ಇನ್ನು ಇವೇ ವಾಕ್ಯಗಳನ್ನೇ ಹದೀಸು ಪಂಡಿತರು ವಿವರಿಸುತ್ತಾ ಖುರಾನ್ ಅವಗಾಹನೆ ಎನ್ನುವ ಗ್ರಂಥದಲ್ಲಿ ಹೀಗೆ ಬರೆದಿದ್ದಾರೆ.

81ನೇ ಅತ್‌ತಕ್ವಿರ್ ಸುರಾನಲ್ಲಿ ಆರನೇ ಆಯತ್‌ನಲ್ಲಿ ಬೆಂಕಿಯ ಜ್ವಾಲೆಗಳು ಹೆಚ್ಚಾಗುವವೆಂದಿದೆ. ಇಲ್ಲೇನೋ ಸಮುದ್ರಗಳು ಬಿರುಕು ಬಿಡುತ್ತದೆಂದಿದೆ. ಎರಡು ಆಯತ್‌ಗಳನ್ನು ಸಮನ್ವಯಪಡಿಸಿದರೆ, ಖುರಾನ್ ಪ್ರಕಾರ ಪ್ರಳಯದಿನದಂದು ಅತ್ಯಂತ ತೀವ್ರವಾದ ಭೂಕಂಪ ಆಗುತ್ತದೆಂದು, ಅದು ಒಂದು ಪ್ರಾಂತಕ್ಕೆ ಸೀಮಿತವಾಗಿರುವುದಿಲ್ಲವೆಂದು, ಭೂಮಿ ಯಾವಾಗಲೂ ಕಂಪನಕ್ಕೆ ಗುರಿಯಾಗುವುದೆಂದು ಅಂದುಕೊಂಡರೆ, ಸಮುದ್ರಗಳು ಬಿರುಕು ಬಿಟ್ಟು ಅವುಗಳಲ್ಲಿ ಜ್ವಾಲೆ ಹೇಗೆ ಏರ್ಪಡುತ್ತದೊ ನಮಗೆ ತಿಳಿಯುವುದು. ಮೊದಲ ಆ ಮಹಾಭೂಕಂಪದಿಂದ ಸಮುದ್ರಗಳ ತಳ ಬಿರುಕು ಬಿಟ್ಟು ಸಮುದ್ರಗಳ ನೀರು ಅದರ ಅಂತರ್ಭಾಗಕ್ಕೆ ಇಳಿದು ಹೋಗುತ್ತವೆ. ಒಳಗೆ ಸತತವಾಗಿ ಅತ್ಯಂತ ಬಿಸಿಯಲ್ಲಿ ಲಾವಾ ಚಲಪಲ ಕುದಿಯುತ್ತಾ ಇರುತ್ತದೆ. ಆ ಲಾವಾ ಸಮೀಪಕ್ಕೆ ನೀರು ಸೇರಿದ ಕೂಡಲೇ ಅದರ ಮೂಲ ಪದಾರ್ಥಗಳಾಗಿ ಬೇರೆಯಾಗುತ್ತವೆ. ಅವುಗಳಲ್ಲಿ ಒಂದು ಉರಿಸುವ ಆಕ್ಸಿಜನ್, ಎರಡನೆಯದು ಸುಡುವ ಹೈಡ್ರೋಜನ್. ಹೀಗೆ ನೀರು ಬೇರೆಯಾಗುವುದು ಜ್ವಾಲೆಗಳು ಏಳುವುದು ಅನ್ನುವುದು ನಿರಂತರ ಕ್ರಿಯ ಪ್ರತಿಕ್ರಿಯೆಯಾಗಿ ಪ್ರಾರಂಭವಾಗುತ್ತದೆ. ಫಲಿತವಾಗಿ ಸಮುದ್ರಗಳಲ್ಲಿ ಬೆಂಕಿಯ ಜ್ವಾಲೆ ಹೆಚ್ಚಾಗುವುವು. ಇದು ನಮ್ಮ ಊಹೆ ಮಾತ್ರವೇ, ನಿಜಜ್ಞಾನ ಅಲ್ಲಾಹ್‌ಗೆ ಅಲ್ಲದೆ ಮತ್ಯಾರಿಗೂ ತಿಳಿದಿಲ್ಲ. ಇಲ್ಲಿ ಸ್ಪಷ್ಟವಾಗಿ ಪ್ರಳಯ ಇದೆ ಎಂದು ಹೇಳದೆ, ಈ ವಿಷಯಗಳು ದೇವರಿಗೆ ತಿಳಿದಿದೆ ಎನ್ನುವುದು ಬಹಳ ಒಳ್ಳೆಯ ಮಾತು. ಈ ಮಾತನ್ನು ಅನುಸರಿಸಿ ನೋಡಿದರೆ ಶ್ರೇಷ್ಠ ಜ್ಞಾನಿಗಳಾದವರು ಸಹ ಪ್ರಳಯವನ್ನು ಕುರಿತು ಖಂಡಿತವಾಗಿ ಹೇಳಲಾರದೆ

ಹೋಗಿದ್ದಾರೆಂದು ತಿಳಿಯುತ್ತಿದೆ. ವಾಸ್ತವವಾಗಿ ಮನುಷ್ಯನಿಗೇ ಅಲ್ಲದೆ ಸಮಸ್ತ ಪ್ರಪಂಚಕ್ಕೂ, ಸಹಸ್ರ ಯುಗಗಳಿಗೂ ಪ್ರಳಯ ಸಂಭವಿಸುತ್ತದೆಂದು ನಂತರ ಸಹಸ್ರ (ಸಾವಿರ) ಯುಗಗಳ ಅನಂತರ ಮತ್ತೆ ಸೃಷ್ಠಿಯೆಲ್ಲವನ್ನು ತಯಾರು ಮಾಡುವುದೆಂದು ದೇವರ ಅಂಶವಾದ ಭಗವಂತನು ಬ್ರಹ್ಮವಿದ್ಯಾಶಾಸ್ತ್ರದಲ್ಲಿ ತಿಳಿಸಿದ್ದಾನೆ. ವಾಸ್ತವಕ್ಕೆ ಜೀವ ಶರೀರಗಳಾದ ಪ್ರಳಯವನ್ನು ಕುರಿತೇ ನಾವು ವಿಶದೀಕರಿಸಿ ಹೇಳಿದ್ದೇವೆ. ಆದರೆ ಪ್ರಪಂಚ ಪ್ರಳಯವನ್ನು ಕುರಿತು ಅದು ಹೇಗಿರುತ್ತದೆಂದು ನಾವೂ ಸಹ ಹೇಳುವುದಿಲ್ಲ. ಕೊನೆಯ ಯುಗದ ಪ್ರಳಯ ಹೇಗಿರುತ್ತದೋ ದೇವರಿಗಲ್ಲದೆ ಯಾರಿಗೂ ತಿಳಿಯದು. ಕೊನೆಯ ಪ್ರಳಯದಲ್ಲಿ ಮಾತ್ರ ಸೃಷ್ಠಿಸಲ್ಪಟ್ಟ ಸಮಸ್ತವೂ ಇಲ್ಲದೆ ಹೋಗುವುದೆಂದು ಮಾತ್ರ ದೇವರೇ ತನ್ನ ಶಾಸ್ತ್ರದಲ್ಲಿ ತಿಳಿಸಿದ್ದಾನೆ.

ಪವಿತ್ರ ಖುರಾನ್ ಗ್ರಂಥದಲ್ಲಿ 81ನೇ ಅತ್ ತಕ್ವೀರ್ ಸುರಾನಲ್ಲಿ 7ನೇ ಆಯತ್‌ನಲ್ಲಿ "ಆತ್ಮಗಳು ಶರೀರಗಳೊಂದಿಗೆ ಒಂದಾಗುತ್ತವೆ" ಎಂದು ಹೇಳಲಾಗಿದೆ. ಅದಕ್ಕೆ ವಿವರ ಕೂಡಾ ಹೀಗೆ ಬರೆಯಲಾಗಿದೆ. "ಮಾನವರು ಮರಣಕ್ಕೆ ಮುನ್ನ ಪ್ರಪಂಚದಲ್ಲಿ ಯಾವ ಆತ್ಮ ಶರೀರಗಳೊಂದಿಗೆ ಸಜೀವವಾಗಿ ಇರುವರೊ, ಅದೇ ರೀತಿ ಹೊಸದಾಗಿ ಬದುಕಿಸಲ್ಪಡುವರು". ಈ ಆಯತ್‌ನಲ್ಲಿ ಪುನರ್ಜನ್ಮ ವಿಷಯವನ್ನು ಪೂರ್ತಿಯಾಗಿ ಹೇಳಿದರೂ, ಅದು ದೇವರು ಮನುಷ್ಯನನ್ನು ಮತ್ತೆ ಹುಟ್ಟಿಸುತ್ತಿದ್ದಾನೆಂದು ತಿಳಿದರೂ, ಆ ಹುಟ್ಟು ಯಾವುದೋ? ಯಾವಾಗ ನಡೆಯುತ್ತದೊ? ಹೇಗೆ ನಡೆಯುತ್ತದೊ ಮನುಷ್ಯರಿಗೆ ತಿಳಿಯದೆ ಹೋಗಿದೆ. ದೇವರು ಅಷ್ಟು ವಿವರವಾಗಿ ಹೇಳಿದರೂ, ದೇವರು ಹೇಳಿದ ವಿಷಯ ಅರ್ಥವಾಗದೆ ಹೋಗಿ, ಬೇರೆ ವಿಧದಲ್ಲಿ ಅರ್ಥವಾಗುವುದಕ್ಕೆ ಕಾರಣ ಮಾಯೆಯ ಪ್ರಭಾವವೆಂದು ತಿಳಿಯುತ್ತದೆ. ಮನುಷ್ಯನನ್ನು ದೇವರ ಕಡೆ ಹೋಗದೆ, ದೇವರ ಜ್ಞಾನ ಅರ್ಥವಾಗದಂತೆ ಮಾಡುವುದೇ ಮಾಯೆ (ಸಾತಾನ್)ಯ ಮುಖ್ಯವಾದ ಕೆಲಸ. ಆದ್ದರಿಂದ ಮಾಯೆ, ಮನುಷ್ಯನನ್ನು ತನ್ನ ಅಧೀನ ದಲ್ಲಿಟ್ಟುಕೊಂಡು ದೇವರ ಜ್ಞಾನ ತಿಳಿಯದಂತೆ ಮಾಡುತ್ತಿದೆ. ಅದರಲ್ಲಿನ

ಭಾಗವಾಗಿ ಪುನರ್ಜನ್ಮ ವಿಷಯವನ್ನು ಅರ್ಥವಾಗದೆ ಅಪಾರ್ಥ ಮಾಡಿಟ್ಟಿದೆ. ಮಾಯೆ ಅಪಾರ್ಥವನ್ನು ಬಿಟ್ಟು, ದೇವರ ಅರ್ಥವನ್ನು ತಿಳಿದುಕೊಳ್ಳುವುದಕ್ಕೆ ಪವಿತ್ರ ಖುರಾನ್ ಗ್ರಂಥದಲ್ಲಿ ಹೇಳಲಾದ ಆಯತ್‌ನಲ್ಲಿನ ಜ್ಞಾನವನ್ನು ಜ್ಞಾನದೃಷ್ಟಿಯಿಂದ ವಿವರಿಸಿಕೊಂಡು ನೋಡೋಣ.

ದೇವರ ಶಾಸನದ ಪ್ರಕಾರ ಮನುಷ್ಯನಾಗಲಿ ಅಥವಾ ಯಾವ ಜೀವರಾಶಿಯಾಗಲಿ ಮೊದಲು ಹುಟ್ಟಿದ ನಂತರ ಆತನ ಜೀವನದಲ್ಲಿ ಬಾಲ್ಯ, ಯೌವನ, ಕೌಮಾರ, ವೃದ್ಧಾಪ್ಯ ಕಳೆದುಹೋಗುವುದು. ನಂತರ ಶರೀರವನ್ನು ಆ ಜೀವಿಯು ಮರಣದಲ್ಲಿ ಬಿಟ್ಟುಹೋಗುವುದು ನಡೆಯುತ್ತದೆ. ಚೆನ್ನಾಗಿ ವಿವರಿಸಿಕೊಂಡು ನೋಡಿದರೆ ಒಂದು ಸಜೀವವಾದ ಮನುಷ್ಯನಲ್ಲಿ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎಂಬ ಐದು ಧಾತುಗಳಿಂದ ಕೂಡಿರುವ ಪ್ರಕೃತಿ ಸಂಬಂಧವಾದ ಶರೀರ ಒಂದು ಭಾಗವಾಗಿ, ಹಾಗೆ ಆತ್ಮಸಂಬಂಧವಾದ ಜೀವಾತ್ಮ ಒಂದು ಭಾಗವಾಗಿ ಒಟ್ಟಿನಲ್ಲಿ ಎರಡು ಭಾಗಗಳಾಗಿ ಇದೆ. ಈ ಎರಡು ಭಾಗಗಳಲ್ಲಿ ಆತ್ಮ ಸಂಬಂಧವಾದ ಜೀವಾತ್ಮ, ಪ್ರಕೃತಿ ಸಂಬಂಧವಾದ ಶರೀರದಲ್ಲಿ ಸ್ವಲ್ಪಕಾಲ ವಾಸಿಸಿ, ಆ ಶರೀರದಲ್ಲಿ ಜೀವನವನ್ನು ಕಳೆದು ಕೊನೆಗೆ ಮರಣವನ್ನು ಹೊಂದುತ್ತಿದ್ದಾನೆ. ಮರಣದಲ್ಲಿ ಜೀವಾತ್ಮ ವಾಸಿಸಿದ ಶರೀರ ಮಾತ್ರ ನಾಶವಾಗಿ ಹೋಗುತ್ತಿದೆ. ಜೀವಿಯು ಇಲ್ಲವೇ ಜೀವಾತ್ಮ, ಮರಣದಲ್ಲಿ ಶರೀರದ ಜೊತೆಗೆ ನಾಶವಾಗುವುದಿಲ್ಲ. ಮರಣ ಅನ್ನುವುದು ಶರೀರದೊಳಗಿರುವ ಪಂಚಭೂತಗಳಿಗೆ ಪ್ರಳಯವನ್ನು ಉಂಟುಮಾಡುತ್ತದೆಂದು, ಶರೀರದಲ್ಲಿ ವಾಸಿಸಿದ ಜೀವಾತ್ಮನಿಗೆ ಅಲ್ಲವೆಂದು ತಿಳಿಯುತ್ತಿದೆ. ಶರೀರ ರೂಪದಲ್ಲಿರುವ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಪ್ರಳಯ ಹೊಂದಿದಾಗ ಅದು ಮರಣವಾಗುತ್ತದೆ. **ಮರಣ ಶರೀರದಲ್ಲಿ ನಡೆಯುವ ಪ್ರಳಯವನ್ನು ಮಾತ್ರವೇ ತಿಳಿಸುತ್ತದೆ.** ಶರೀರದೊಳಗಿರುವ ಸಮುದ್ರವು ಸಮುದ್ರವಾಗಿರದೆ ಅದು ಬಿರುಕು ಬಿಟ್ಟಾಗ, ಶರೀರದೊಳಗಿನ ಅಗ್ನಿ ಸಾಮಾನ್ಯವಾಗಿರದೆ ಅದು ಸಮುದ್ರವನ್ನು ಕೂಡಾ ಉರಿಸಿದಾಗ, ಶರೀರದೊಳಗಿನ ಭೂಮಿ ಶಾಂತವಾಗಿರದೆ ಕಂಪಿಸಿದಾಗ, ಹಾಗೆ

ಶರೀರದೊಳಗಿರುವ ಆಕಾಶ ಪ್ರಶಾಂತವಾಗಿರದೆ ಎರಡಾಗಿ ಬಿರುಕು ಬಿಟ್ಟಾಗ, ಶರೀರದೊಳಗಿನ ಗಾಳಿ ಸಾಮಾನ್ಯವಾಗಿರದೆ ಹೋಗಿ ವಿಪರೀತ ಶಬ್ದವನ್ನು ಹುಟ್ಟಿಸಿದಾಗ, ನಕ್ಷತ್ರಗಳು ಗಾಳಿಗೆ ಚೆದರಿ ಹೋದಾಗ, ಜೀವಾತ್ಮನು ಅಂತಹ ಪ್ರಳಯ ಹೊಂದಿದ ಶರೀರದಲ್ಲಿ ಇರದೆ ಹೊರಗೆ ಬರುವುದು, ಅದೇ ಮರಣ. ಇಂತಹ ಪ್ರಳಯವನ್ನೆ ಅಲ್ಲಾಹ್ (ದೇವರು ಅಥವಾ ಪರಮಾತ್ಮ) ಅಲ್ ಇನ್ ಫಿತಾರ್ 82ನೇ ಸುರಾನಲ್ಲಿ 1, 2, 3 ಆಯತ್‌ಗಳಲ್ಲೂ, 81ನೇ ಸುರಾ ಆದ ಅತ್ ತಕ್ವಿರ್‌ನಲ್ಲಿ 1, 2, 3 ಆಯತಗಳಲ್ಲಿಯೂ, 80 ನಂಬರ್ ಸುರಾ ಆದ ಅಬಸ ಸುರಾನಲ್ಲಿ 37 ಆಯತ್‌ನಲ್ಲೂ ಹಜ್ರತ್ ಮಹಮ್ಮದ್ (ಸ) ಪ್ರವಕ್ತನಿಂದ ಪವಿತ್ರ ಖುರಾನ್‌ನಲ್ಲಿ ಹೇಳಿಸಿದ್ದಾರೆ.

80ನೇ ಅಬಸ ಸುರಾದಲ್ಲಿ 21ನೇ ಆಯತ್‌ನಲ್ಲಿ "ನಂತರ ಮೃತ್ಯುವನ್ನು ಕೊಟ್ಟಿದ್ದಾನೆ, ಸಮಾಧಿಗೆ ಸೇರಿಸಿದ್ದಾನೆ" ಎಂದು ಕೂಡಾ ಇದೆ. ಹಾಗೆ ಏಕೆ ಹೇಳಿದ್ದಾರೆಂದರೆ ಮನುಷ್ಯನ ಜೀವನ ಸ್ವಲ್ಪಕಾಲ ಸಾಗಿದ ನಂತರ ಶರೀರ ನಾಶವಾಗಿ ಮೃತ್ಯು ಉಂಟಾಗುತ್ತಿರುವ ವಿಷಯ ಪ್ರತ್ಯಕ್ಷ ಸತ್ಯವಾದದ್ದು. ದೇವರು ಹೇಳಿದ ಹಾಗೆ ಪ್ರತ್ಯಕ್ಷವಾಗಿ ಎಲ್ಲರಿಗೂ ತಿಳಿಯುವ ಹಾಗೆ ಮರಣ ಸಂಭವಿಸಿದ ನಂತರ ಶರೀರವನ್ನು ಬಿಟ್ಟಿರುವ ಜೀವಿಯು (ಜೀವಾತ್ಮ) ಏನಾಗುತ್ತಿದ್ದಾನೆ? ಎಂಬ ಪ್ರಶ್ನೆಗೆ ಉತ್ತರವಾಗಿ ಮೃತ್ಯುವನ್ನು ಕೊಟ್ಟ ದೇವರೆ, ಸಮಾಧಿಗೆ ಕೂಡಾ ಸೇರಿಸಿದ್ದಾನೆ ಎನ್ನುವ ವಿಷಯವು ಅಬಸ ಸುರಾದಲ್ಲಿ 21 ಆಯತ್‌ನಲ್ಲಿ ಹೇಳಲಾಗಿದೆ. ಇಲ್ಲಿ ವಿವರಿಸಿಕೊಂಡು ಹೇಳಿಕೊಂಡರೆ, ಒಬ್ಬ ಮನುಷ್ಯನ ಮರಣ ಎಲ್ಲರಿಗೂ ತಿಳಿಯುತ್ತಿದೆ. ನಂತರದ ವಿಷಯವೇ ಯಾರಿಗೂ ತಿಳಿಯದು. ಆದರೆ ನಮಗೆ ತಿಳಿದಿರುವುದೇನೆಂದರೆ! ಮನುಷ್ಯ ಮರಣಿಸಿದ ನಂತರ ಮರಣಿಸಿದ ಶರೀರದೊಳಗಿನ ಜೀವಾತ್ಮ ತಕ್ಷಣವೇ ಹೊಸದಾಗಿ ತಯಾರಾಗಿ, ತಾಯಿಗರ್ಭದಿಂದ ಪ್ರಸವಿಸಲ್ಪಟ್ಟ ಶಿಶುಶರೀರದೊಳಗೆ ಸೇರುತ್ತಿದೆ. ಎಲ್ಲ ವಿಧಗಳಲ್ಲಿ ಕುರುಡನಾದ ಜೀವಿಯು ಸ್ವತಃ ಒಬ್ಬನಾಗಿ ಶಿಶುಶರೀರದಲ್ಲಿ ಸೇರುವುದಿಲ್ಲ. ಸೃಷ್ಠಿ ಆದಿಯಿಂದ ತನ್ನೊಂದಿಗೆ ಸಹ ಶರೀರದಲ್ಲಿರುವ ಆತ್ಮನೊಂದಿಗೆ ಸೇರಿ,

ಜೋಡಿಯಾಗಿ ಹೋಗಿ ಹೊಸ ಶಿಶು ಶರೀರವನ್ನು ಸೇರುತ್ತಿದ್ದಾನೆ. ಹೊಸ ಶರೀರವನ್ನು ಸೇರುವುದರಲ್ಲಿ ಜೀವಾತ್ಮನ ಜೊತೆಗಿರುವ ಆತ್ಮ ಮಾರ್ಗ ದರ್ಶಕವಾಗುತ್ತದೆ. ಹಾಗೆ ಮೃತ್ಯುವಿನ ನಂತರ ಒಂದು ಸೆಕೆಂಡ್ ಕೂಡ ತಡವಿಲ್ಲದೆ ಜೀವಾತ್ಮ ಹೊಸ ಶರೀರವನ್ನು ಸೇರುವುದನ್ನೇ ಅಬಸ ಸುರಾನಲ್ಲಿ 21ನೇ ಆಯತ್‌ನಲ್ಲಿ "ಮೃತ್ಯುವನ್ನು ಕೊಟ್ಟಿದ್ದಾನೆ, ಸಮಾಧಿಗೆ ಸೇರಿಸಿದ್ದಾನೆ" ಎಂದಿದೆ. ಜೀವಿಯು ಆತ್ಮನೊಂದಿಗೆ ಹೊಸ ಶಿಶು ಶರೀರವನ್ನು ಸೇರಿದಾಗ, ಆ ಜೀವಿಯು ಸಮಾಧಿಗೆ ಸೇರಿದ ಹಾಗೆ ಎಂದು ಹೇಳಲಾಗಿದೆ. ಇದನ್ನು ಅನುಸರಿಸಿ ನೋಡಿದರೆ ಸಮಾಧಿ ಅಂದರೆ! ತಾಯಿಗರ್ಭದಿಂದ ಹುಟ್ಟಿದ ಶಿಶು ಶರೀರವೆಂದು ತಿಳಿಯುತ್ತಿದೆ. ಒಂದು ಬಾರಿ ಮರಣಿಸಿದ ಜೀವಿಯು ಅಂದರೆ ಶರೀರವನ್ನು ಬಿಟ್ಟಿರುವ ಜೀವಿಯು ಎರಡನೇ ಬಾರಿ ಸಮಾಧಿಯಿಂದ ಏಳುತ್ತಾನೆ. ಶಿಶು ಶರೀರವೇ ಸಮಾಧಿ ಎಂದು ಹೇಳಿದ್ದೇವಲ್ಲವೆ! ಜೀವಿಯು ಮತ್ತು ಜೀವನೊಂದಿಗೆ ಇರುವ ಆತ್ಮ ಎರಡೂ ಶರೀರದಲ್ಲಿ ನಿಕ್ಷಿಪ್ತವಾಗಿರುವುದನ್ನು ಸಮಾದಿ ಮಾಡಿರುವ ಜೀವಿಯಾಗಿ ಹೇಳಿಕೊಂಡಿದ್ದೇವೆ. ಸೃಷ್ಠಿ ಆದಿಯಿಂದ ಜೀವರಾಶಿಗಳು ಹುಟ್ಟುವ ವಿಷಯದಲ್ಲಿ ಸಮಾನವಾಗಿ ಎಲ್ಲರಿಗೂ ಅನ್ವಯಿಸುವುದು, ಆದ್ದರಿಂದ ಇದನ್ನು ಸಮಾಧಿ ಅಥವಾ ಸಮಾದಿ ಎಂದು ಹೇಳಿಕೊಂಡಿದ್ದೇವೆ. ಮನುಷ್ಯನೊಬ್ಬನ ಜೀವನ ಪ್ರಾರಂಭದಲ್ಲಿ ಶಿಶುಶರೀರ ಅಥವಾ ಹೊಸ ಶರೀರವೆನ್ನುವ ಸಮಾಧಿಯಿಂದ ಮನುಷ್ಯ ಏಳಲ್ಪಡುತ್ತಾನೆ.

ಇಲ್ಲಿ ಸಮಾಧಿಯಿಂದ ಏಳಲ್ಪಡುವುದು ಎಂದರೆ! ಶಿಶು ಶರೀರದೊಳಗೆ ಸೇರಿ ನಿಕ್ಷಿಪ್ತವಾಗಿರುವ ಜೀವಿಯನ್ನು, ಮತ್ತೆ ಪ್ರಪಂಚದ ಎಚ್ಚರದೊಳಗೆ ತರುವುದೆಂದೇ ಅರ್ಥ. ಪ್ರತಿದಿನ ನಾವು ನಿದ್ರೆ ಹೋಗುವವನನ್ನು ಎಬ್ಬಿಸುತ್ತೇವಲ್ಲವೆ! ಹಾಗೆ ಮೊದಲ ಶಿಶು ಶರೀರದೊಳಗಿರುವ ಜೀವಿಯನ್ನು ಹೊರಗಿನ ಜ್ಞಾಪಕದೊಳಗೆ ತರುವುದನ್ನು ಸಮಾಧಿಯಿಂದ ಏಳಿಸುವುದು ಎಂದು ಹೇಳಬಹುದು. ಪ್ರತಿ ದಿನ ಮನುಷ್ಯ ನಿದ್ರೆಯೊಳಗೆ ಹೋಗಿ ಶರೀರದಲ್ಲಿ ನಿಕ್ಷಿಪ್ತವಾಗಿ ಹೋಗುತ್ತಿದ್ದಾನೆ. ಅಂತಹ ಮನುಷ್ಯನನ್ನು ಶರೀರದಿಂದ ಮತ್ತೊಬ್ಬ ಮನುಷ್ಯ

ಎಬ್ಬಿಸಬಹುದು. ಆದರೆ ಜೀವನ ಪ್ರಾರಂಭದಲ್ಲಿ ಅಂದರೆ ಮೊಟ್ಟಮೊದಲು ಎಬ್ಬಿಸುವವನು ದೇವರೇ ಎಂದು ಜ್ಞಾಪಕವಿಟ್ಟುಕೊಳ್ಳಬೇಕು. ಆದಿಯಲ್ಲಿ ಏಳಿಸುವುದನ್ನೇ ಸಮಾಧಿ ಅನ್ನುತ್ತಿದ್ದೇವೆ. ನಂತರ ಜೀವನದಲ್ಲಿ ಯಾವಾಗ ಎದ್ದರೂ ನಿದ್ರೆಯಿಂದ ಎಬ್ಬಿಸುವುದೇ ನಡೆಯುತ್ತದೆ. ನಿದ್ರೆಯು ಎಲ್ಲರಿಗೂ ಸಮವೇ ಆದರೂ ನಿದ್ರೆಯಿಂದ ಏಳುವುದು ಎಲ್ಲರಲ್ಲಿ ಸಮಾನವಾಗಿಯೇ ಇದ್ದರೂ, ಅದು ಆದಿಯಲ್ಲಿ ನಡೆಯುವ ಕೆಲಸವಲ್ಲ. ಆದ್ದರಿಂದ ಸಮಾದಿಯಿಂದ ಏಳುವುದು ಎಂದು ಅನ್ನಲಾರೆವು. ಜೀವನದಲ್ಲಿ ಮೊದಲು ಏಳಲ್ಪಟ್ಟ ನಂತರ ಯಾವಾಗ ಎದ್ದರೂ, ಯಾರು ಎಬ್ಬಿಸಿದರೂ ಅದು ನಿದ್ರೆಯಿಂದ ಏಳುವುದೆಯಾಗಲಿ, ಸಮಾಧಿಯಿಂದ ಎದ್ದ ಹಾಗೆ ಅಲ್ಲ. ಜೀವನದ ಮೊದಲ ಭಾಗದಲ್ಲಿ ಶಿಶು ಶರೀರವೇ ಸಮಾಧಿ, ಆದಿಯಲ್ಲಿ ಏಳಲ್ಪಡುವುದೇ ಸಮಾಧಿಯಿಂದ ಏಳುವುದು ಎಂದು ಹೇಳಬಹುದು. ಅಷ್ಟೇ ಅಲ್ಲದೆ ಜೀವನದಲ್ಲಿ ನಿದ್ರೆಯಿಂದ ಯಾರಾದರೂ ಎಬ್ಬಿಸಬಹುದು. ಆದರೆ ಆದಿಯಲ್ಲಿ ಶಿಶು ಶರೀರದಿಂದ ಯಾರನ್ನು ಯಾರೂ ಎಬ್ಬಿಸುವುದಿಲ್ಲ. ಅದು ಒಬ್ಬ ದೇವರಿಗೆ ಮಾತ್ರವೇ ಸಾಧ್ಯ.

ಒಬ್ಬ ಮನುಷ್ಯನನ್ನು ದೇವರು ಸೃಷ್ಠಿಸಿದ್ದಾನೆ, ಆತನಿಗೆ ಜೀವನವನ್ನು ಕೊಟ್ಟಿದ್ದಾನೆ, ಮೃತ್ಯುವನ್ನು ಕೊಟ್ಟಿದ್ದಾನೆ, ನಂತರ ಸಮಾಧಿಗೆ ಸೇರಿಸಿದ್ದಾನೆ. ಮತ್ತೆ ಸಮಾಧಿಯಿಂದ ಎಬ್ಬಿಸಿದ್ದಾನೆ. ಇದನ್ನು ಯಾವ ಮನುಷ್ಯ ಇಲ್ಲ ಎನ್ನಲಾಗುವುದಿಲ್ಲ. ಇದನ್ನೇ ಭಗವದ್ಗೀತೆಯಲ್ಲಿ ಹುಟ್ಟಿದವನು ಸಾಯುವುದು ತಪ್ಪುವುದಿಲ್ಲ, ಸತ್ತವನು ಹುಟ್ಟುವುದು ತಪ್ಪುವುದಿಲ್ಲವೆಂದು ದೇವರು ಹೇಳುವುದೇ ಅಲ್ಲದೆ ಮನುಷ್ಯನಿಗೆ ಬಾಲ್ಯ, ಯೌವನ, ಕೌಮಾರ್ಯ, ವೃದ್ಧಾಪ್ಯ ನಂತರ ಮರಣ ತಪ್ಪುವುದಿಲ್ಲವೆಂದು ಸಹ ಹೇಳಿದ್ದಾನೆ. ಇದೇ ವಿಷಯವನ್ನೇ ಪವಿತ್ರ ಖುರಾನ್ ಗ್ರಂಥದಲ್ಲಿಯೂ ಸಹ ಅಬಸ ಸುರಾದಲ್ಲಿ 19, 20, 21, 22 ಆಯತ್‌ಗಳಲ್ಲಿ "ಅಲ್ಲಾಹ್ ಆತನನ್ನು ಹುಟ್ಟಿಸಿದ್ದಾನೆ, ಆತನ ಭಾಗ್ಯವನ್ನು (ಕರ್ಮವನ್ನು) ನಿರ್ಣಯಿಸಿದ್ದಾನೆ. ನಂತರ ಆತನ ಜೀವನ ಮಾರ್ಗವನ್ನು ಸುಗಮಗೊಳಿಸಿದ್ದಾನೆ. ನಂತರ ಮೃತ್ಯುವನ್ನು ಕೊಟ್ಟಿದ್ದಾನೆ, ಸಮಾಧಿಗೆ

ಸೇರಿಸಿದ್ದಾನೆ. ಮತ್ತೆ ಆತನು (ದೇವರು) ಮನುಷ್ಯನನ್ನು ಸಮಾಧಿಯಿಂದ ಎಬ್ಬಿಸಿ ನಿಲ್ಲಿಸುತ್ತಾನೆ." ಈ ವಿಷಯವನ್ನು ದೇವರು ಪೂರ್ತಿಯಾಗಿ ಬಹಿರಂಗ ಮಾಡಿ ಹೇಳಿದಾಗ ಎಲ್ಲರಿಗೂ ಪ್ರತ್ಯಕ್ಷ ಪ್ರಮಾಣವಾಗಿ ಕಾಣಿಸುತ್ತಿದ್ದರೂ, ಮಾಯೆಯ ಪ್ರಭಾವದಿಂದ ಇದೇ ವಿಷಯ ಅತ್ಯಂತ ರಹಸ್ಯವಾಗಿ ಬದಲಾಗಿ ಹೋಗಿದೆ. ಅಷ್ಟೇ ಅಲ್ಲದೇ ವಕ್ರಮಾರ್ಗದಲ್ಲಿ ಅರ್ಥವಾಗಿದೆ. ಸಮಾಧಿ ಎಂದರೆ ಸತ್ತುಹೋದ ಮನುಷ್ಯನನ್ನು ಹೂಳಿಸಿಡುವುದು ಅಥವಾ ಮುಚ್ಚಿಡುವುದು ಎಂದು ಅಂದುಕೊಳ್ಳುತ್ತಿದ್ದಾರೆ. ಮನುಷ್ಯ ಮೃತದೇಹವನ್ನು ಹೂಳಿಸಿಡುವುದನ್ನು ಗೋರಿ ಅನ್ನಲಾಗುತ್ತದೆ, ಆದರೆ ಸಮಾಧಿ ಅನ್ನಲಾಗುವುದಿಲ್ಲ. **ಶರೀರವನ್ನು ಮುಚ್ಚಿಡುವುದು ಗೋರಿ, ಜೀವಿಯನ್ನು ಮುಚ್ಚಿಡುವುದು ಸಮಾಧಿ ಎಂದು ತಿಳಿಯಬೇಕು.**

ಮೃತ್ಯುವನ್ನು ಕೊಟ್ಟಿದ್ದಾನೆ, ಸಮಾಧಿಗೆ ಸೇರಿಸಿದ್ದಾನೆ ಎನ್ನುವ ಆಯತ್‌ಗಳ ಪ್ರಕಾರ ಮನುಷ್ಯ ಮರಣಿಸಿದ ನಂತರ ಹೊಸ ಶಿಶು ಶರೀರಕ್ಕೆ ಸೇರಿಸಲ್ಪಡುತ್ತಾನೆಂದು ಅರ್ಥವಾಗುತ್ತದೆ. ಹಾಗೆ ಸಮಾದಿಗೆ ಸೇರಿಸಲ್ಪಟ್ಟವನು ಆ ಶರೀರ ಸಮಾಧಿಯಿಂದ ಏಳಲ್ಪಡುತ್ತಿದ್ದಾನೆ. ಸಮಾಧಿಯಿಂದ ಎಬ್ಬಿಸುವುದು ಯಾರನ್ನು ಎಂದು ಪ್ರಶ್ನಿಸಿಕೊಂಡರೆ, ಚೈತನ್ಯ ಆತ್ಮ ಸಂಬಂಧವಾದ ಜೀವಾತ್ಮನನ್ನು ಎಂದು ತಿಳಿಯುತ್ತಿದೆ. ಶಿಶು ಶರೀರದ ಆಳದಲ್ಲಿ ಸೇರಿದ ಜೀವಿಯನ್ನು ಹೊರಗಿನ ಜ್ಞಾಪಕದೊಳಗೆ ಎಬ್ಬಿಸುವುದೆ, ಜೀವಿಯನ್ನು ಸಮಾಧಿಯಿಂದ ಎಬ್ಬಿಸುವುದೆಂದು ತಿಳಿಯಬೇಕು. ಅಷ್ಟೇ ಅಲ್ಲದೆ ಹಾಗೆ ಏಳಲ್ಪಟ್ಟ ಜೀವಾತ್ಮನ ಶರೀರ ಹೇಗಿರುತ್ತದೆಂದರೆ ಅತ್‌ತಕ್ವಿರ್ ಸುರಾದಲ್ಲಿ 7ನೇ ಆಯತ್‌ನಲ್ಲಿ ಹೇಳಿದ ಹಾಗೆ ಪ್ರಳಯದ ನಂತರ "ಆತ್ಮಗಳು (ಶರೀರದಲ್ಲಿ) ಒಂದಾದಾಗ ಅಂದರೆ ಮಾನವರ ಮರಣಕ್ಕೆ ಮೊದಲು ಪ್ರಪಂಚದಲ್ಲಿ ಯಾವ ಆತ್ಮ ಶರೀರದೊಂದಿಗೆ ಸಜೀವವಾಗಿ ಇರುವನೋ ಅದೇ ವಿಧವಾಗಿ ಹೊಸದಾಗಿ ಅವರು ಬದುಕಿಸಲ್ಪಡುವರು ಎಂದು ಹದೀಸು ಪಂಡಿತರು ಹೇಳಿದ ಹಾಗೆ, ಮನುಷ್ಯ ಸಾಯುವ ಮೊದಲು ಎಂತಹ ಶರೀರದಿಂದ ಇರುತ್ತಿದ್ದನೋ ಅಂತಹ ಮೂಳೆಗಳು, ರಕ್ತ ಮಾಂಸವಿರುವ ಶರೀರದೊಳಗೇ ಬದುಕಿಸಲ್ಪಡುವನು. ಕೆಲವರು ಹೊಸದಾಗಿ ಬದುಕಿಸಲ್ಪಡುವ

ಶರೀರವನ್ನು ಕುರಿತು ಕೂಡ ತಪ್ಪಾಗಿ ತಿಳಿದಿದ್ದಾರೆಂದು, ಅಂತಹವರು ಮನುಷ್ಯ ಸತ್ತು ಹೋದ ನಂತರ ಹಳೇ ಶರೀರವನ್ನೇ ಜೀವಾತ್ಮನು ಮತ್ತೆ ಪಡೆಯುತ್ತಿದ್ದಾನೆಂದು ಅಂದುಕೊಳ್ಳುತ್ತಿದ್ದಾರೆ, ಅದು ತಪ್ಪು. ಏಕೆಂದರೆ! ಮನುಷ್ಯ ಸತ್ತ ನಂತರ ಮೃತದೇಹ ಶಿಥಿಲವಾಗಿ ಪೂರ್ತಿ ಕಾಣಿಸದೆ ಹೋಗುತ್ತದೆ. ಅದು ಪಂಚ ಭೂತಗಳಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿಯೊಂದಿಗೆ ಬೆರೆತು ಹೋಗುತ್ತದೆ. ಮತ್ತೆ ಹೊಸ ಶರೀರವನ್ನು ಸಮಾಧಿಯಾಗಿ ಜೀವಿಯು ಹೊಂದಿದರೂ, ಅದು ಪಂಚಭೂತಗಳಿಂದ ತಯಾರಾಗಿರುತ್ತದೆ ಮತ್ತು ಮೊದಲ ಶರೀರದಲ್ಲಿ ರಕ್ತವಿರುವಂತೆ ಇರುತ್ತದೆ. ಹಾಗೆ ಹಳೆಯ ಶರೀರದಲ್ಲಿರುವಹಾಗೆ ಮೂಳೆಗಳು, ಕಂಡರಗಳು ಇರುವವು. ಆದರೆ ಅವು ಹೊಸದಾಗಿರುವವು. ಹಳೆಯವೆಲ್ಲ ಪ್ರಳಯದಲ್ಲಿ (ಮರಣದಲ್ಲಿ) ಹೋಗಿ ಮತ್ತೆ ಹೊಸವು, ಜನ್ಮದಲ್ಲಿ ಉಂಟಾಗುತ್ತವೆ. ಪ್ರವಕ್ತರವರು ಅದೇ ಶರೀರದಿಂದ ಏಳಲ್ಪಡುತ್ತಾರೆ ಎಂದಾಗ, ಆ ಶರೀರ ಹಳೆಯದರ ಹಾಗೆಯೇ ಎಲ್ಲ ಇರುವುದೆಂದು ಅರ್ಥ. ಆದರೆ ಕೊಳೆತು ಹೋಗಿ ನಾಶ ಹೊಂದಿದ ಶರೀರ ಅಲ್ಲವೆಂದು ತಿಳಿಯಬೇಕು. ದೇವರು ಎಷ್ಟು ಶರೀರಗಳನ್ನಾದರೂ ನಾಶ ಮಾಡಬಲ್ಲವನು. ಹಾಗೆಯೇ ಎಷ್ಟು ಹೊಸ ಶರೀರಗಳನ್ನಾದರೂ ಸೃಷ್ಟಿಸಬಲ್ಲವನು. ಆತನು ಸರ್ವಶಕ್ತಿ ಸಂಪನ್ನನೂ, ಏನಾದರೂ ಮಾಡಬಲ್ಲವನು. ಹೊಸ ಶರೀರಗಳನ್ನು ಸೃಷ್ಟಿಸುವ ಸಾಮರ್ಥ್ಯ ಇರುವ ದೇವರು ನಾಶವಾದ ಶರೀರಗಳ ಸುದ್ದಿಗೆ ಹೋಗುವವನಲ್ಲ. ಹೊಸದನ್ನು ಸೃಷ್ಟಿಸಬಲ್ಲ ದೇವರು ಹಳೆಯದನ್ನು ಮತ್ತೆ ಸರಿಮಾಡಬೇಕಾದ (ದುರಸ್ತಿ ಮಾಡಬೇಕಾದ) ಅಗತ್ಯವಿಲ್ಲ. ಆದ್ದರಿಂದ ಹಳೆಯ ಶರೀರಗಳ ಹಾಗೆಯೇ ಇರುವ ಹೊಸ ಶರೀರಗಳಲ್ಲಿ ಮತ್ತೆ ಮನುಷ್ಯನನ್ನು ಎಬ್ಬಿಸುತ್ತಿದ್ದಾನೆ. ಹೊಸ ಶರೀರವೇ ಸಮಾಧಿ. ಜೀವನದಲ್ಲಿ ಮನುಷ್ಯನಿಗೆ ಮೊದಲ ಜ್ಞಾಪಕವೇ ಸಮಾಧಿಯಿಂದ ಏಳುವುದು. ಮನುಷ್ಯನ ಶರೀರ ನಶಿಸುವುದು, ಸಾಯುವುದು, ಮತ್ತೆ ಹೊಸ ಶರೀರದಿಂದ ಹುಟ್ಟುವುದು ಜಗತ್ತಿನಲ್ಲಿ ಪ್ರತ್ಯಕ್ಷವಾಗಿ ನಡೆಯುತ್ತಿರುವ ಸತ್ಯ. ದೇವರು ಸತ್ಯ ಸ್ವರೂಪನು. ಆದ್ದರಿಂದ ದೇವರ ಮಾತು ಪ್ರತ್ಯಕ್ಷ ಪ್ರಮಾಣವು, ಆದ್ದರಿಂದ ದೇವರು ಹೇಳಿರುವುದು ಏನಿದೆಯೋ ಅದು ನಡೆಯುತ್ತಿದೆ.

ನಡೆಯುತ್ತಿರುವ ವಿಷಯವನ್ನು ವಿಶದೀಕರಿಸಿಕೊಂಡು ನೋಡಿದಾಗ ಅದರಲ್ಲಿ ದೇವರು ಹೇಳಿದ ಸತ್ಯ ತಿಳಿಯುತ್ತದೆ. ಭೂಮಿಯ ಮೇಲೆ ಎಷ್ಟೋ ಜನರು ಹುಟ್ಟಿ ತಮ್ಮ ಗತ ಜನ್ಮದಲ್ಲಿನ ವಿಷಯಗಳನ್ನು ಹೇಳುತ್ತಿದ್ದಾರೆ. ಅದನ್ನು ಅನುಸರಿಸಿದರೆ ಮನುಷ್ಯನಿಗೆ ಪ್ರತ್ಯಕ್ಷವಾಗಿ ಪುನರ್ಜನ್ಮಗಳಿವೆಯೆಂದು ತಿಳಿಯುತ್ತದೆ. ಪುನರ್ಜನ್ಮದಲ್ಲಿ ಪ್ರತ್ಯಕ್ಷವಾಗಿ ದೇವರು ಹೇಳಿದ ಹಾಗೆ, ಶರೀರ ಸಮಾಧಿಯಿಂದ ಮನುಷ್ಯ ಏಳುವುದು ಸಹ ನಡೆಯುತ್ತಿದೆ. ಮತ್ತೆ ಹುಟ್ಟಿದಾಗ ಮನುಷ್ಯನಿಗೆ ಹೊಸ ಶರೀರ ಬಂದಹಾಗೆ ಎಲ್ಲರಿಗೂ ತಿಳಿಯುತ್ತದೆ. ನಮ್ಮ ಎದುರುರೇ ನಡೆಯುತ್ತಿರುವ, ದೇವರು ಹೇಳಿದ ಸತ್ಯವನ್ನು ಗ್ರಹಿಸಿಕೊಳ್ಳದೆ, ಈಗಲ್ಲ ಯಾವಾಗಲೋ ನಡೆಯುತ್ತದೆ ಎಂದುಕೊಳ್ಳುವುದು ತಪ್ಪು. ಯಾವಾಗಲೋ ನಡೆಯುತ್ತದೆಂದು ಹೇಳುವುದರಿಂದ ದೇವರ ಮಾತನ್ನು ಧಿಕ್ಕರಿಸಿದಂತಾಗುತ್ತದೆ. ಅದರಿಂದ ಅದು ಸತ್ಯವೋ ಅಸತ್ಯವೋ ಎನ್ನುವ ಅನುಮಾನವೂ ಬರಬಹುದು. ನಡೆಯುತ್ತಿರುವ ಸತ್ಯವನ್ನು ಗಮನಿಸದವನು ನಿಜವಾಗಿ ಕಣ್ಣಿದ್ದರೂ ಕುರುಡನಾಗುವನು. ಜ್ಞಾನನೇತ್ರ ಇಲ್ಲದವನಾಗುವನು.

**ಪವಿತ್ರ ಖುರಾನ್ ಗ್ರಂಥದಲ್ಲಾಗಲಿ, ಪರಿಶುದ್ಧ ಬೈಬಲ್ ಗ್ರಂಥದಲ್ಲಾಗಲಿ, ಪರಮ ಪವಿತ್ರ ಪರಿಶುದ್ಧ ಭಗವದ್ಗೀತೆಯಲ್ಲಾಗಲಿ** ಪ್ರವಕ್ತರು ಹೇಳಿದ ಮಾತುಗಳು ದೇವರ ವಾಕ್ಯಗಳೇ ಆದರೂ, ಆ ವಾಕ್ಯಗಳು ಮನುಷ್ಯನಿಗೆ ಸರಿಯಾಗಿ ಅರ್ಥವಾಗದೆ ಹೋಗಿವೆ. ಆದ್ದರಿಂದ ಹೇಳಿರುವುದು ಒಂದಾದರೆ ಮನುಷ್ಯ ಅರ್ಥ ಮಾಡಿಕೊಂಡಿರುವುದು ಮತ್ತೊಂದಾಗುತ್ತದೆ. ಹಾಗೆ ಅರ್ಥ ಮಾಡಿಕೊಂಡಿರುವುದರಿಂದ ದೇವರ ಸಂದೇಶ ಮೂಲ ಗ್ರಂಥಗಳ ರೂಪದಲ್ಲಿ ನಮ್ಮ ಮುಂದೆ ಇದ್ದರೂ, ಅದರಲ್ಲಿನ ಸತ್ಯವನ್ನು ನಾವು ಪೂರ್ತಿಯಾಗಿ ಅರ್ಥ ಮಾಡಿಕೊಳ್ಳದೆ ಹೋಗಿದ್ದೇವೆ. ದೇವರು ಹೇಳಿದ ಕೆಲವು ವಿಷಯಗಳೇ ಮನುಷ್ಯನಿಗೆ ಅರ್ಥವಾಗಿರಬಹುದು. ಆದರೆ ಎಲ್ಲ ವಾಕ್ಯಗಳು ಅರ್ಥವಾಗಿಲ್ಲವೆಂದು ಹೇಳಬಹುದು. ಹಾಗೇಕೆ ನಡೆಯುತ್ತಿದೆ? ದೇವರು ಹೇಳಿದರೂ ಮನುಷ್ಯ ಆ ವಿಷಯಗಳನ್ನು ಪೂರ್ತಿಯಾಗಿ ಏಕೆ ಗ್ರಹಿಸಿಕೊಳ್ಳದೆ ಹೋಗುತ್ತಿದ್ದಾನೆ

ಎಂದು ಯೋಚಿಸಿದಾಗ ತಿಳಿಯುವುದೇನೆಂದರೆ! ದೇವರು ಮನುಷ್ಯನನ್ನು ಹುಟ್ಟಿಸುವ ಮೊದಲೇ ಪ್ರಕೃತಿಯನ್ನು ಹುಟ್ಟಿಸಿದ್ದಾನೆ. ನಂತರ ಮನುಷ್ಯನನ್ನು, ಜೀವರಾಶಿಗಳನ್ನು ಹುಟ್ಟಿಸಿದ್ದಾನೆ. ಪರಮಾತ್ಮ (ದೇವರು) ನಿಂದ ಹುಟ್ಟಿದ ಪ್ರಕೃತಿ ಐದು ಭಾಗಗಳಾಗಿ ವಿಭಜಿಸಲ್ಪಟ್ಟಿದೆ. ಆ ಐದು ಭಾಗಗಳಿಂದ ಮನುಷ್ಯನ ಶರೀರ ತಯಾರಾಗಿದೆ. ಮನುಷ್ಯನ ಶರೀರದಲ್ಲಿ ಪರಮಾತ್ಮನಿಗೆ ಸಂಬಂಧಿಸಿದ ಆತ್ಮ, ಜೀವಾತ್ಮ ಎನ್ನುವ ಎರಡು ಆತ್ಮಗಳು ವಾಸಿಸುತ್ತವೆ. ಪರಮಾತ್ಮನೊಂದಿಗೂ ಸಹ ಮನುಷ್ಯನ ಶರೀರದಲ್ಲಿ ಮೂರು ಆತ್ಮಗಳು ವಾಸಿಸಿದಂತಾಗುತ್ತದೆ. ಇದರ ಪ್ರಕಾರ ಒಬ್ಬ ಸಜೀವ ಮನುಷ್ಯನ ಶರೀರದಲ್ಲಿ ಮೂರು ಆತ್ಮಗಳು, ಐದು ಪ್ರಕೃತಿ ಭಾಗಗಳು ವಾಸಿಸುತ್ತವೆ. ಆದರೆ ಮೂರು ಆತ್ಮಗಳಲ್ಲಿ ದೇವರಾದ ಪರಮಾತ್ಮನನ್ನು ಲೆಕ್ಕಿಸಿಕೊಳ್ಳದೆ ಹೇಳಿಕೊಳ್ಳುವುದು ಧರ್ಮ. ಆದ್ದರಿಂದ ಒಂದು ಶರೀರದಲ್ಲಿ ಜೀವಾತ್ಮ, ಆತ್ಮಗಳನ್ನು ಮಾತ್ರವೇ ಹೇಳಿಕೊಳ್ಳಬೇಕಾಗಿರುತ್ತದೆ. ಪ್ರಕೃತಿಯಿಂದ ಹುಟ್ಟಿರುವ ಶರೀರದಲ್ಲಿ ಮುಖ್ಯವಾದದ್ದು ಮತ್ತೊಂದು ಇದೆ. ಅದೇ ಮಾಯೆ (ಸಾತಾನ್) ಅಥವಾ ಸೈತಾನ್ ಎಂದು ಕರೆಯಲ್ಪಡುತ್ತದೆ. ಮರಣದಲ್ಲಿ ಶರೀರ ನಶಿಸಿದರೂ, ಜೀವಾತ್ಮ ಆತ್ಮಗಳು ನಶಿಸದೆ ಮತ್ತೆ ಹೇಗೆ ಜನ್ಮಿಸುತ್ತಿವೆಯೋ, ಹಾಗೆಯೇ ಮಾಯೆ ಸಹ ಶರೀರದ ಪ್ರಳಯದಲ್ಲಿ ನಾಶವಾಗದೆ, ಜೀವಾತ್ಮನೊಂದಿಗೆ ಪ್ರಯಾಣಿಸಿ ಹೊಸ ಶರೀರವನ್ನು ಸೇರುತ್ತಿದೆ.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಷಯವೇನೆಂದರೆ! ಪರಮಾತ್ಮ ತನ್ನ ಸೃಷ್ಟಿಯನ್ನು ರೂಪಿಸಿದಾಗ ಮೊಟ್ಟಮೊದಲು ಪ್ರಕೃತಿಯನ್ನು ಸೃಷ್ಟಿಸಿದ್ದಾನೆ. ಪ್ರಕೃತಿಯಿಂದ ಜೀವರಾಶಿಗಳ ಶರೀರಗಳನ್ನು ಸೃಷ್ಟಿಸಿದ್ದಾನೆ. ಪ್ರಕೃತಿಯಿಂದ ತಯಾರಾದ ಶರೀರಗಳು ಮರಣದಲ್ಲಿ ನಾಶ ಹೊಂದಿದರೂ, ಪ್ರಕೃತಿ ಮಾತ್ರ ನಾಶನವಾಗದೆ ಉಳಿದಿದೆ. ಸೃಷ್ಟಿಯ ಆದಿಯಿಂದ ಸಮುದ್ರ, ಭೂಮಿ, ಆಕಾಶ, ಅಗ್ನಿ, ಗಾಳಿ ಹೇಗಿವೆಯೋ ಸೃಷ್ಟಿ ಅಂತ್ಯದವರೆಗೂ ಹಾಗೇ ಇರುವುವು. ಸೃಷ್ಟಿ ಅಂತ್ಯವಾದ ಮಹಾಪ್ರಳಯದಲ್ಲಿ ಪ್ರಕೃತಿ ನಾಶವಾಗುವುದು. ಮಹಾ ಪ್ರಳಯದಲ್ಲಿಯೂ ಸಹ ನಾಶವಾಗದಿರುವವನು ದೇವರು ಒಬ್ಬನೇ. ಇತ್ತ

ಪ್ರಪಂಚವಿರುವಾಗಾಗಲಿ, ಅತ್ತ ಪ್ರಪಂಚ ಇಲ್ಲದಿರುವಾಗಾಗಲಿ ಒಂದೇ ಮಟ್ಟದಲ್ಲಿ ಇರುವವನು ದೇವರು ಒಬ್ಬನೇ. ಪ್ರಪಂಚ ಸೃಷ್ಟಿಸಲ್ಪಟ್ಟ ನಂತರ ಶರೀರಗಳು ಎಷ್ಟು ಬಾರಿ ನಾಶವಾದರೂ, ಜೀವಾತ್ಮನು ಎಷ್ಟು ಬಾರಿ ಮತ್ತೆ ಹುಟ್ಟಿದರೂ ಪ್ರಕೃತಿ ನಾಶವಾಗದ ಹಾಗೆ, ಪ್ರಕೃತಿ ಜನಿತವಾದ ಮಾಯೆ ಸಹ ನಾಶವಾಗದೆ ಇದೆ. ಪ್ರಕೃತಿಯನ್ನು ವಿಭಜಿಸಿ ನೋಡಿದರೆ ಐದು ಭಾಗಗಳಾಗಿ ಇದ್ದ ಹಾಗೆ, ಮಾಯೆಯನ್ನು ವಿಭಜಿಸಿ ನೋಡಿದರೆ ಮೂರು ಭಾಗಗಳಾಗಿ ಇದೆ. ಮಹಾ ಪ್ರಳಯದವರೆಗೂ ನಾಶವಾಗದೆ ಐದು ಭಾಗಗಳ ಪ್ರಕೃತಿ ಹೇಗೆ ಇದೆಯೋ, ಹಾಗೇ ಮಹಾಪ್ರಳಯದವರೆಗೂ ಮೂರು ಭಾಗಗಳ ಮಾಯೆ ನಾಶವಾಗದೆ ಇರುತ್ತದೆ.

ತನಗೆ ಪ್ರತ್ಯರ್ಥಿಯಾಗಿ ಇರುವುದಕ್ಕೆ ದೇವರೆ ಸ್ವತಃ ಮಾಯೆಯನ್ನು ಸೃಷ್ಟಿಸಿದ್ದಾನೆ. ದೇವರ ವಿರುದ್ಧ ನಡೆದುಕೊಳ್ಳುವ ಹಾಗೆ ದೇವರೇ ಮಾಯೆಯನ್ನು ಆಜ್ಞಾಪಿಸಿದ್ದಾನೆ. ದೇವರಿಂದ ಸೃಷ್ಟಿಸಲ್ಪಟ್ಟ ಮಾಯೆ ದೇವರಿಗೆ ಸರ್ವ ಕಾಲಗಳಲ್ಲಿಯೂ ವಿಧೇಯತೆ, ವಿನಮ್ರತೆಯಿಂದ ದೇವರ ಆಜ್ಞೆಯನ್ನು ತಪ್ಪದೆ ಪಾಲಿಸುತ್ತದೆ. ದೇವರು ಪುರುಷನಾದರೆ ಪ್ರಕೃತಿ ಸ್ತ್ರೀಯಾಗಿದೆ. ಸ್ತ್ರೀಲಿಂಗವಾದ ಪ್ರಕೃತಿಯಿಂದ ದೇವರು ಹುಟ್ಟಿಸಿದ ಮಾಯೆ ಸಹ ಸ್ತ್ರೀ ತತ್ತ್ವವಾಗಿಯೇ ಹೇಳಲ್ಪಡುತ್ತದೆ. ದೇವರ ಆಜ್ಞೆಯಿಂದ ಪ್ರಕೃತಿಗೆ ಹುಟ್ಟಿದ ಮಾಯೆ ಸೃಷ್ಟಿ ಆದಿಯಿಂದ ದೇವರ ಆಜ್ಞೆ ಪ್ರಕಾರ ದೇವರ ವಿರುದ್ಧ ನಡೆಯುತ್ತಾ ಪ್ರಜೆಗಳನ್ನು ನಡೆಸುತ್ತಿದೆ. ಮಾಯೆ ಪ್ರಜೆಗಳನ್ನು ಹೇಗೆ ನಡೆಸುತ್ತದೆಂದರೆ! ಮಾಯೆ ಎನ್ನುವುದು ಮೂರು ಭಾಗಗಳಾದ ಗುಣಗಳಾಗಿ ಮನುಷ್ಯನ ತಲೆಯಲ್ಲಿ ಸ್ಥಾನವನ್ನು ಏರ್ಪಡಿಸಿಕೊಂಡಿದೆ. ತನ್ನ ಗುಣಗಳಲ್ಲಿಯೇ ಜೀವಾತ್ಮನನ್ನು ವಾಸಿಸುವಂತೆ ಮಾಡಿಕೊಂಡಿದೆ. ಸಾತ್ವಿಕ, ರಾಜಸ, ತಾಮಸ ಗುಣಭಾಗಗಳಾದ ಮಾಯೆ ಮಾನವನನ್ನು ದೇವರ ಕಡೆಗೆ ಹೋಗದಂತೆ ಮಾಡುವುದಕ್ಕೆ ತನ್ನ ಕೆಲಸವನ್ನು ತಾನು ಮಾಡುತ್ತಿದೆ. ದೇವರು ತನ್ನ ಪ್ರವಕ್ತರಿಂದ ತನ್ನ ಜ್ಞಾನವನ್ನು ಮಹಾ ಗ್ರಂಥಗಳಿಂದ ಹೇಳಿಸಿದರೆ, ಮಾಯೆ ಮಾತ್ರ ತನ್ನ ಗುಣಗಳಿಂದ ತನ್ನ ಭಾವವನ್ನು

ಮನುಷ್ಯರಿಗೆ ಜೋಡಿಸುತ್ತಿದೆ. ಒಬ್ಬ ಪ್ರವಕ್ತನಿಂದ ಒಂದು ದೇವರ ಧರ್ಮವನ್ನು ಹೇಳಿಸಿದರೆ, ಅದು ಮಾಯೆಯ ಪ್ರಭಾವದಿಂದ ಬೇರೆ ವಿಧದಲ್ಲಿ ಅರ್ಥವಾಗುತ್ತದೆ. ಆದ್ದರಿಂದ ದೇವರ ಜ್ಞಾನ ಪೂರ್ತಿಯಾಗಿ ಯಾರಿಗೂ ಅರ್ಥವಾಗದೆ ಹೋಗಿದೆ. ದೇವರು ಒಂದು ಭಾವನೆಯಿಂದ ಹೇಳಿದರೆ ಅದನ್ನೇ ಮಾಯೆ ಮತ್ತೊಂದು ಭಾವನೆಯಲ್ಲಿ ಅರ್ಥವಾಗುವಂತೆ ಮಾಡುತ್ತಿದೆ. ಆದ್ದರಿಂದ ಭಗವದ್ಗೀತೆ ಹಿಂದುಗಳಿಗೆ (ಇಂದೂಗಳಿಗೆ), ಬೈಬಲ್ ಕ್ರೈಸ್ತವರಿಗೆ, ಖುರಾನ್ ಮುಸ್ಲಿಮರಿಗೆ ಪೂರ್ತಿಯಾಗಿ ದೇವರು ಹೇಳಿದ ಭಾವನೆಯ ಪ್ರಕಾರ ಅರ್ಥವಾಗಿಲ್ಲವೆಂದು ಹೇಳಬಹುದು.

ಭೂಮಿಯ ಮೇಲೆ ಯಾವ ಮತಸ್ಥನಿಗಾಗಲಿ ತಲೆಯಿರುತ್ತದೆ. ಆ ತಲೆಯಲ್ಲಿ ತ್ರಿಗುಣ ರೂಪದಲ್ಲಿ ಮಾಯೆ ಇರುತ್ತದೆ. ಯಾವ ಮತಸ್ಥನಾದರೂ ಆಗಲಿ ಸಾತಾನ್ ಅಥವಾ ಸೈತಾನ್ ಎನ್ನುವ ಮಾಯೆಯನ್ನು ದಾಟಿ ದೇವರ ಕಡೆಗೆ ಹೋಗಬೇಕೆಂದರೆ ಬಹಳ ದುಸ್ಸಾಧ್ಯ. ಈ ಮಾತು ನಾನು ಹೇಳಿರುವುದಲ್ಲ. ಭಗವದ್ಗೀತೆಯಲ್ಲಿನ ವಾಕ್ಯವೇ ಹೀಗಿದೆ. “ಗುಣಮಯೀ ಮಮ ಮಾಯಾ ದುರತ್ಯಯಾ” ಗುಣಗಳಿಂದ ಕೂಡಿಕೊಂಡ ನನ್ನ ಮಾಯೆ ದುಸ್ಸಾಧ್ಯವಾದದ್ದೆಂದು ಹೇಳಲಾಗಿದೆ. ಮೂಲಗ್ರಂಥಗಳಲ್ಲಿಯೇ ಮಾಯೆ ದುಸ್ಸಾಧ್ಯವಾದದ್ದೆಂದು ಹೇಳಿದಾಗ ಅದನ್ನು ಜಯಿಸುವುದು ಸುಲಭವಲ್ಲ. ಮಾಯೆ ಮನುಷ್ಯನಲ್ಲಿದ್ದು ಯಾರಿಂದಲೂ ಗುರುತಿಸಲಾಗದೆ ಏಮಾರಿಸುತ್ತಾ, ನೀನು ದೇವರ ಮಾರ್ಗ ದಲ್ಲಿಯೇ ಇದ್ದೀಯ ಅನ್ನುವಂತೆ ನಂಬಿಸಿ ಎಲ್ಲರನ್ನೂ ತನ್ನ ಮಾರ್ಗದಲ್ಲಿ ನಡೆಸಿಕೊಳ್ಳುತ್ತಿದೆ. ನಾವು ದೊಡ್ಡ ಜ್ಞಾನಿಗಳು ಎಂದು ಅಂದುಕೊಳ್ಳುವವರು ಸಹ ಮಾಯೆಯ ಭಾವನೆಯಲ್ಲಿ ಬಿದ್ದು, ಅದನ್ನೇ ದೇವರ ಭಾವವೆಂದು ಕೊಳ್ಳುವುದರಿಂದ, ದೇವರ ಭಾವನೆ ತಿಳಿಯದೆ ಹೋಗಿದೆ. ನಾವು ಇಲ್ಲಿಯವರೆಗೂ ಹೇಳಿಕೊಂಡ ಪುನರ್ಜನ್ಮ ವಿಷಯದಲ್ಲಾಗಲಿ, ಸಮಾಧಿ ವಿಷಯದಲ್ಲಾಗಲಿ ಮಾಯೆ ಪ್ರಭಾವದಿಂದ ದೇವರ ಭಾವನೆ ಮುಚ್ಚಿಹೋಗಿರುವುದರಿಂದ ಸಮಾಧಿ ಮೃತ ಶರೀರಕ್ಕೆಂದು, ಪುನರ್ಜನ್ಮಗಳು ಇಲ್ಲವೆಂದು, ಪ್ರಳಯ ಅನೇಕ ಯುಗಗಳ ಅಂತ್ಯದಲ್ಲೇ ಎಂದು ತಪ್ಪಾಗಿ ಅರ್ಥ ಮಾಡಿಕೊಂಡಿದ್ದಾರೆ. ಮಾಯೆ ನಿಮ್ಮನ್ನು

ಭ್ರಮೆಯಲ್ಲಿ ಇರಿಸಿದೆಯೆಂದು ನಾವು (ನಾನು+ನನ್ನ ಆತ್ಮ) ಹೇಳಿದರೂ, ಮಾಯೆ ಅವರಿಗೆ ನಮ್ಮನ್ನು ತಪ್ಪಾಗಿ ತೋರಿಸಿ, ನಮ್ಮ ಮಾತನ್ನು ಯಾವ ಕಾರಣಕ್ಕೂ ಕೇಳದಂತೆ ಮಾಡುತ್ತಿದೆ. ಯಾರಿಗೆ ಅವರು ಸ್ವಚ್ಛವಾದ ದೈವಮಾರ್ಗದಲ್ಲಿ ಇದ್ದ ಹಾಗೆ, ಮಾಯೆ ಭ್ರಮೆಪಡುವಂತೆ ಮಾಡುವುದರಿಂದ ಧರ್ಮಗಳು, ಅಧರ್ಮಗಳಾಗಿಯೇ ಉಳಿದುಹೋಗುತ್ತಿವೆ. ಅಧರ್ಮಗಳನ್ನು ನಾಶ ಮಾಡಿ ಮತ್ತೆ ಧರ್ಮಗಳಾಗಿ ಬದಲಾಯಿಸುವ ಕೆಲಸವನ್ನು ದೇವರೇ ಮಾಡಬೇಕು, ಆದರೆ ಮನುಷ್ಯರಾದ ನಮ್ಮಂತವರಿಂದಾಗದು.

ಮಾಯೆ ದೇವರ ದೊಡ್ಡತನವನ್ನು ಕಡಿಮೆ ಮಾಡುವ ಭಾವನೆಗಳನ್ನು ಶ್ರೇಷ್ಟ ಜ್ಞಾನಿಗಳೆಂದುಕೊಂಡವರಿಂದಲೇ ಹೇಳಿಸಲ್ಪಡುತ್ತಿದೆ. ದೇವರ ಮೇಲೆ ಪೂರ್ತಿ ವಿಶ್ವಾಸದಿಂದ ದೇವರಿಗೆ ಯಾವಾಗಲೂ ವಿಧೇಯರಾಗಿ ಇದ್ದೇವೆಂದುಕೊಂಡವರಿಂದ ಅವರಿಗೆ ತಿಳಿಯದಂತೆ ದೇವರ ಮೇಲೆಯೇ ಅನುಮಾನ ಬರುವ ಹಾಗೆ, ದೇವರ ದೊಡ್ಡತನವನ್ನು ಕಡಿಮೆ ಮಾಡುವಂತೆ ಹೇಳಿಸುತ್ತದೆ. ಒಂದು ಕಡೆ ದೇವರು ಹೇಳಿದ ಮಾತಿನ ಬೆಲೆಯನ್ನು ಕಡಿಮೆ ಮಾಡುವ ಹಾಗೆ ಅದಕ್ಕೆ ವಿರುದ್ಧವಾದ ಮಾತನ್ನು ದೈವಜ್ಞಾನಿಗಳೆನ್ನುವವರಿಂದಲೇ ಹೇಳಿಸುತ್ತದೆ. ಈ ವಿಧವಾಗಿ ಎಷ್ಟೋ ಜನ ಜ್ಞಾನಿಗಳು ಮಾಯೆಯ ಪ್ರಭಾವದಲ್ಲಿದ್ದು ಹಿಂದೆ ಮುಂದೆ ಆಲೋಚಿಸದೆ ದೇವರ ಜ್ಞಾನವನ್ನು ಕುರಿತು ಹೇಳುತ್ತಿದ್ದಾರೆ. ಹಾಗೆ ಹೇಳುವುದರಿಂದ ಅವರು ಹೇಳಿದ ಮಾತು ದೇವರು ಮೊದಲು ಹೇಳಿದ ವಾಕ್ಯಕ್ಕೆ ವಿಭಿನ್ನವಾಗಿ ಇರುತ್ತದೆ. ಹಾಗೆ ಹಿಂದೆ ನಡೆಯುವ ಪ್ರತ್ಯಕ್ಷ ಸಂಘಟನೆಗೆ ಕೂಡ ಭಿನ್ನವಾಗಿ ಇರುವುದು. ಆದರೆ ಅಂತಹ ಪ್ರಜ್ಞೆಯಿಲ್ಲದೆ ಮಾಯೆ, ಮನುಷ್ಯನಿಂದ ತನ್ನ ಭಾವನೆಯನ್ನೆ ಹೇಳಿಸುತ್ತದೆ. ದೇವರ ಭಾವನೆ, ತನ್ನ ಭಾವನೆ ಒಂದೇ ಎಂದು ಎಲ್ಲರನ್ನು ಭ್ರಮಿಸುವಂತೆ ಮಾಡುತ್ತದೆ. ಈ ವಿಷಯ ನಿಮಗೆ ಚೆನ್ನಾಗಿ ಅರ್ಥವಾಗಬೇಕೆಂದರೆ ಒಬ್ಬ ದೈವಜ್ಞಾನಿ ದೈವತ್ವವನ್ನು ಬೋಧಿಸುವಾಗ ಇದು ದೇವರ ಜ್ಞಾನವೇ ಎಂದು ಆತನನ್ನು ನಂಬಿಸಿ ಹೇಗೆ ಹೇಳಿಸುತ್ತದೋ ಉದಾಹರಣೆಗೆ ನೋಡಿರಿ.

ಈ ವಿಷಯವನ್ನು ಹೇಳುವುದಕ್ಕಿಂತ ಮೊದಲು ನಾವು ಈ ದಿನ (18–09–2011) ನ್ಯಾಷನಲ್ ಜಿಯೋಗ್ರಫಿ ಟಿವಿ ಛಾನಲ್‌ನಲ್ಲಿ ಒಂದು ಪ್ರೋಗ್ರಾಮನ್ನು ನೋಡಿದೆವು. ಅದು "ಟೆನ್ ಇಯರ್ಸ್ ಆಫ್ ಒಸಾಮಾಸ್ ಟೆರರ್" (Ten Years Of Osama's Terror) ಅನ್ನುವ ಪ್ರೋಗ್ರಾಮ್‌ನಲ್ಲಿ ಇರಾಕ್ ಟೆರರಿಸ್ಟರು ಐದು ಜನ ಒಂದು ಕಡೆ ನಿಂತುಕೊಂಡಿದ್ದಾರೆ. ಐದು ಜನ ಉಗ್ರವಾದಿಗಳು ಕಪ್ಪುಬಟ್ಟೆಗಳನ್ನು ಧರಿಸಿ ಮುಖಕ್ಕೆ ಮುಖವಾಡಗಳನ್ನು ಧರಿಸಿದ್ದಾರೆ. ಆ ಐದು ಜನರ ಮುಂದೆ ರೋಜ್ ಕಲರ್ ಬಟ್ಟೆಗಳನ್ನು ಧರಿಸಿದ ವ್ಯಕ್ತಿ ಕುಳಿತುಕೊಂಡಿದ್ದಾನೆ. ಐದು ಜನ ನಿಂತುಕೊಂಡಿರುವ ಉಗ್ರವಾದಿಗಳು ಇರಾಕ್ ದೇಶದವರಾದರೆ, ಅವರ ಮುಂದೆ ಕುಳಿತಿರುವ ವ್ಯಕ್ತಿ ಅಮೆರಿಕಾ ದೇಶದವನು. ಯಾತ್ರಿಕನಾಗಿ ಬಂದಿರುವ ಅಮೆರಿಕಾ ಪೌರನನ್ನು ಇರಾಕ್ ಉಗ್ರವಾದಿಗಳು ಬಂಧಿಸಿ ತಮ್ಮ ಹತ್ತಿರ ಇಟ್ಟುಕೊಂಡಿದ್ದಾರೆಂದು ಅರ್ಥವಾಗಿದೆ. ಅಲ್ಲಿ ಇರಾಕ್ ಉಗ್ರವಾದಿಗಳು ತಮಗೆ ಅಮೆರಿಕಾ ದೇಶ ಶತ್ರುದೇಶವೆಂದು, ಆ ದೇಶದ ಮೇಲೆ ಇರುವ ವಿರೋಧದಿಂದ ಈ ಅಮೆರಿಕಾ ಪೌರನನ್ನು ಶಿಕ್ಷಿಸುತ್ತಿದ್ದೇವೆಂದು, ಅದರಿಂದ ತಮ್ಮ ಉಗ್ರವಾದದ ಬಲವೇನೆಂದು ಅಮೆರಿಕಕ್ಕೆ ತಿಳಿಯುತ್ತದೆಂದು ಹೇಳಿ, ಒಂದೇ ಬಾರಿಗೆ ತಮ್ಮ ಮುಂದೆ ಕುಳಿತಿರುವ ಅಮೆರಿಕಾ ಪೌರನನ್ನು ಪಕ್ಕಕ್ಕೆ ತಳ್ಳಿ ಆತನ ಶಿರಚ್ಛೇದನ ಮಾಡಿದ್ದಾರೆ. ಆ ದೃಶ್ಯವನ್ನು ಅವರು ವೀಡಿಯೊ ತೆಗೆದು ಅಮೆರಿಕಾಕ್ಕೆ ಕಳುಹಿಸಿದ್ದಾರೆ. ಅದೇ ದೃಶ್ಯವನ್ನೇ ಟಿವಿಯಲ್ಲೂ ತೋರಿಸಿದರು. ಆ ದೃಶ್ಯವನ್ನು ನಾನೊಬ್ಬನೇ ಅಲ್ಲದೆ ಆ ಸಮಯದಲ್ಲಿ ನನ್ನ ರೂಮಿನಲ್ಲಿರುವ ಮತ್ತೆ ಕೆಲವರು ನೋಡಿದರು. ನನ್ನೊಂದಿಗೆ ಆ ದೃಶ್ಯವನ್ನು ನೋಡಿದವರಿಗೆ ಆ ಸಂಘಟನೆ ಬಹಳ ಕ್ರೂರವಾದ ಕೆಲಸವಾಗಿ ಕಾಣಿಸಿತು. ಆಗ ಅವರು "ಇದು ಎಷ್ಟು ದುರ್ಮಾರ್ಗವಾದ ಕೆಲಸ, ಅಮೆರಿಕಾ ಸರ್ಕಾರವು ಉಗ್ರವಾದಿಗಳಿಗೆ ಕೆಡುಕನ್ನು ಮಾಡಿದ್ದರೆ ಆ ಸರ್ಕಾರದ ಮೇಲೆ ಕೋಪವಿರಬಹುದು. ಅವರು ಅಮೆರಿಕಾ ಸರ್ಕಾರದ ಮೇಲೆ ದ್ವೇಷವನ್ನು ತೀರಿಸಿಕೊಳ್ಳಬಹುದು. ಸರ್ಕಾರದಲ್ಲಿದ್ದು ತಮಗೆ ಕೆಡುಕು ಮಾಡಿದ ನಾಯಕರ ಮೇಲೆ ಶತ್ರುತ್ವವನ್ನು ಬೆಳೆಸಿಕೊಳ್ಳಬಹುದು. ಅದಕ್ಕೆ ತಕ್ಕ ಹಾಗೆ ಕೆಡುಕು

ಮಾಡಿದವರನ್ನು ಹಿಂಸಿಸಬಹುದು, ಸಾಯಿಸಬಹುದು, ತಮ್ಮ ಕೋಪವನ್ನು ತೀರಿಸಿಕೊಳ್ಳಬಹುದು. ಆದರೆ ಇಲ್ಲಿ ಯೋಚಿಸಿದರೆ ಸರ್ಕಾರ ಬೇರೆ, ಪ್ರಜೆಗಳು ಬೇರೆ ಅಲ್ಲವೆ! ಸರ್ಕಾರವು ಪಾಲಿಸುವುದು, ಪ್ರಜೆಗಳು ಪಾಲಿಸಲ್ಪಡುವವರಲ್ಲವೆ! ಜನರು ತಮ್ಮ ಬದುಕು ತಾವು ಬದುಕುತ್ತಿದ್ದಾರಾಗಲಿ, ಇತರ ದೇಶದವರಿಗೆ ಶತ್ರುಗಳಲ್ಲ ತಾನೆ! ಯಾವ ಶತ್ರುತ್ವವಿಲ್ಲದ ಪ್ರಜೆಗಳ ಮೇಲೆ ಉಗ್ರವಾದಿಗಳು ತಮ್ಮ ದ್ವೇಷವನ್ನು ತೀರಿಸಿಕೊಳ್ಳುವುದು ಕ್ರೂರತ್ವವೂ, ದುರ್ಮಾರ್ಗವಲ್ಲದೆ ಬೇರೇನೂ ಅಲ್ಲವೆಂದು, ಇದು ಮನುಷ್ಯರು ಮಾಡಬೇಕಾದ ಕೆಲಸವಲ್ಲವೆಂದು, ಅಮಾನುಷವೆಂದು ಉಗ್ರವಾದಿಗಳಾದ ಮಾತ್ರಕ್ಕೆ ಯಾರ ಮೇಲಿನ ಕೋಪದಿಂದ ಯಾರನ್ನು ಶಿಕ್ಷಿಸುತ್ತೇವೆನ್ನುವ ಯೋಚನೆಯಾಗಲಿ, ಆಲೋಚನೆಯಾಗಲಿ ಅವರಿಗೆ ಇರುವುದಿಲ್ಲವೆ? ಶತ್ರುವಿನ ಮೇಲೆ ದಾಳಿ ಮಾಡುವುದು, ಸಾಯಿಸುವುದು ಯುದ್ಧನೀತಿ ಆಗುತ್ತದೆ. ಆದರೆ ಶತ್ರುವಲ್ಲದವನ ಮೇಲೆ ದಾಳಿ ಮಾಡುವುದು, ಸಾಯಿಸುವುದು ಯುದ್ಧನೀತಿ ಎನ್ನಿಸಿಕೊಳ್ಳುವುದಿಲ್ಲ. ಇದು ಮನುಷ್ಯ ಮಾಡುವ ರಾಕ್ಷಸತ್ವ ಅನ್ನಿಸಿಕೊಳ್ಳುತ್ತದೆ. ಇದಕ್ಕೆ ನೀವೇನನ್ನುತ್ತೀರಾ" ಎಂದು ನನ್ನನ್ನು ಕೇಳಿದರು.

ಆಗ ನಾನು ಹೀಗೆ ಹೇಳಿದೆ. ನಿಮಗಾಗಲಿ ನನಗಾಗಲಿ ಇರಾಕ್ ಉಗ್ರವಾದಿಗಳು ಮಾಡಿರುವುದು ತಪ್ಪಾಗಿ ಕಾಣಿಸಿದರೂ, ಅವರಿಗೆ ಅದು ಸರಿಯಾಗಿಯೆ ಕಾಣಿಸಿರುತ್ತದೆ. ನಾವು ಆ ಕೆಲಸವನ್ನು ಕ್ರೂರವಾದ ಕೆಲಸವೆಂದು ಹೇಳಿದರೂ, ಅದು ಅವರಿಗೆ ವೀರರು ಮಾಡುವ ಸಾಹಸ ಕೆಲಸವಾಗಿ ಕಾಣಿಸಿರಬಹುದು. ಒಬ್ಬ ಮನುಷ್ಯ ಎದುರಿಗಿರುವವರ ದೃಷ್ಠಿಯಲ್ಲಿ ತಪ್ಪು ಮಾಡಿದರೂ, ಅದು ಆ ಮನುಷ್ಯನಿಗೆ ಸಮರ್ಥನೀಯವಾದ ಕೆಲಸವಾಗಿ ರಬಹುದು. ಈಗ ನೀವು ನನ್ನನ್ನು ಕೇಳಿದಂತೆ ಈ ನಡುವೆ ಮುಂಬಯಿ ನಗರದಲ್ಲಿ ನಡೆದ ಉಗ್ರವಾದಿಗಳ ದಾಳಿಯನ್ನು ಕುರಿತು, ಉಗ್ರವಾದವನ್ನು ಸಮರ್ಥಿಸುವ ಉಗ್ರವಾದ ಸಹಾನುಭೂತಿಪರನನ್ನು ಹೀಗೆ ಪ್ರಶ್ನಿಸಿದೆನು. "ಮುಂಬಯಿ ನಗರದಲ್ಲಿ ತಮ್ಮೊಂದಿಗೆ ಯಾವ ಶತ್ರುತ್ವವಿಲ್ಲದ ಮುಗ್ಧ ಜನರನ್ನು

ಉಗ್ರವಾದಿಗಳು ಇಷ್ಟಾನುಸಾರ ಸುಟ್ಟು ಸಾಯಿಸುವುದು ನ್ಯಾಯವೇ? ದೇವರು ಈ ಕಾರ್ಯವನ್ನು ಒಪ್ಪಿಕೊಳ್ಳುತ್ತಾನೆಯೇ? ಎಂದು ಕೇಳಿದೆ. ಅದಕ್ಕೆ ಆತನು ಹೇಳಿದ ಉತ್ತರವು ನನಗೆ ಆಶ್ಚರ್ಯವನ್ನುಂಟುಮಾಡಿತು. ಒಂದು ದೇಶದ ನಾಯಕನ ಕಣ್ತೆರೆಸುವುದಕ್ಕಾಗಿ ಆ ದೇಶದ ಪ್ರಜೆಗಳನ್ನು ಹಿಂಸಿಸಿದರೂ ಪರವಾಗಿಲ್ಲ. ಆ ದೇಶಾಧಿಪತಿಯನ್ನು ಬದಲಾಯಿಸುವುದಕ್ಕೆ ಅಥವಾ ಪರೀಕ್ಷಿಸುವುದಕ್ಕೆ ಆತನ ರಾಜ್ಯದಲ್ಲಿರುವವನನ್ನು ಹಿಂಸಿಸಿದರೂ ಅಥವಾ ಸಾಯಿಸಿದರೂ ತಪ್ಪೇನು ಅಲ್ಲ. ಹಾಗೆ ಅಮೆರಿಕಾ ದೇಶಾಧಿಪತಿಯಲ್ಲಿ ಬದಲಾವಣೆ ತರುವುದಕ್ಕೆ ಆ ದೇಶದ ಪೌರನನ್ನು ಸಾಯಿಸಿದರೂ ತಪ್ಪೇನು ಅಲ್ಲವೆಂದ. ಅದಕ್ಕೆ ನಾನು ಬದಲಾಗಿ "ಇದೇನು ನ್ಯಾಯ? ಯಾವನೋ ನಿನಗೆ ಶತ್ರುವಾದರೆ ಅವನ ಮೇಲೆ ದಾಳಿ ಮಾಡದೆ ನಿನ್ನೊಂದಿಗೆ ಯಾವ ಶತ್ರುತ್ವವಿಲ್ಲದ, ನಿನ್ನೊಂದಿಗೆ ಯಾವ ಸಂಬಂಧವಿಲ್ಲದವನ ಮೇಲೆ ದಾಳಿ ಮಾಡುವುದು ಪಾಪಕಾರ್ಯ ವಾಗುತ್ತದೆ. ದೇವರು ಇಂತಹ ಕಾರ್ಯವನ್ನು ಯಾವ ಕಾರಣಕ್ಕೂ ಒಪ್ಪಿಕೊಳ್ಳುವುದಿಲ್ಲ. ಒಂದು ಮನೆಯ ಯಜಮಾನ ಪಕ್ಕದ ಮನೆಯವರನ್ನು ನಷ್ಟಪಡಿಸಿದರೆ, ನಷ್ಟಹೋದ ವ್ಯಕ್ತಿ ನಷ್ಟ ಮಾಡಿದ ವ್ಯಕ್ತಿಯ ಮನೆಯ ಬಾಲಕನನ್ನು ಬಜಾರಿನಲ್ಲಿ ಸಿಕ್ಕಿದ್ದಾನೆಂದು ಸಾಯಿಸಿದರೆ, ಸಮಾಜ ಒಪ್ಪಿಕೊಳ್ಳುತ್ತದೆಯೆ? ಯಾವ ಪಾಪವು ತಿಳಿಯದ ಹುಡುಗನನ್ನು ಸಾಯಿಸುವುದು ಅನ್ಯಾಯ, ಅಕ್ರಮ ಅನ್ನುತ್ತದಲ್ಲವೆ! ಅದೇ ರೀತಿ ಅಮೆರಿಕಾ ಎನ್ನುವ ಮನೆಯ ಯಜಮಾನ ಆದ ಜಾರ್ಜ್‌ಬುಷ್ ಮೇಲಿನ ಕೋಪದಿಂದ ಯಾವ ಪಾಪವು ತಿಳಿಯದ ಆ ದೇಶ (ಮನೆಯ) ದ ಪ್ರಜೆಗಳನ್ನು ಹಿಂಸಿಸಿ ಸಾಯಿಸುವುದು ಕೂಡ ಅನ್ಯಾಯ, ಅಕ್ರಮ, ಅಮಾನುಷ ಆಗುತ್ತದಲ್ಲವೆ! ಇಂತಹ ಕೆಲಸವನ್ನು ಮಾಡಿದವರು ದೇವರ ದೃಷ್ಟಿಯಲ್ಲಿ ಶಿಕ್ಷಾರ್ಹನಾಗುತ್ತಾನೆ" ಎಂದು ಹೇಳಿದೆ.

ನನ್ನ ಮಾತನ್ನು ಕೇಳಿದ ವ್ಯಕ್ತಿ ದೇವರ ಲೆಕ್ಕದಲ್ಲಿ ನಾವು ಶಿಕ್ಷಾರ್ಹರೆ? ನಿನಗೆ ತಿಳಿದಿದೆಯೋ ತಿಳಿದಿಲ್ಲವೋ ದೇವರು ಇದೇ ವಿಷಯವನ್ನು ನಮ್ಮ ಗ್ರಂಥದಲ್ಲಿ ಸುರಾ ಅನ್‌ಪಾಲ್ (8.28) ನಲ್ಲಿ 28 ಆಯತ್‌ನಲ್ಲಿ ಹೀಗೆ ಹೇಳಿದ್ದಾನೆ.

"ವಾಸ್ತವಕ್ಕೆ ನಿಮ್ಮ ಆಸ್ತಿಪಾಸ್ತಿಗಳು, ನಿಮ್ಮ ಸಂತಾನವು ನಿಮ್ಮನ್ನು ಪರೀಕ್ಷಿಸುವ ಸಾಧನಗಳೆಂದು, ನಿಶ್ಚಯವಾಗಿ ದೇವರ ಹತ್ತಿರ ದೊಡ್ಡ ಪ್ರತಿಫಲ ಇದೆಯೆಂದು ತಿಳಿದುಕೊಳ್ಳಿ" ಎಂದು ಬರೆಯಲಾಗಿದೆ. ಇದಕ್ಕೆ ನಮ್ಮ ಹದೀಸು ಪಂಡಿತರು ಹೇಳುವ ವಿವರ ಹೀಗಿದೆ. ಈ ಜೀವನದ ನಂತರ ಜೀವನಕ್ಕಾಗಿ ನಿನ್ನ ಮನೆಯಲ್ಲಿ ಯಾವ ಪರೀಕ್ಷೆಯಾಗಲಿ ನಡೆಯಬಹುದು. ನಿನ್ನ ಹೆಂಡತಿ ರೋಗಗ್ರಸ್ತಳಾಗಬಹುದು, ನಿನ್ನ ಆಸ್ತಿ ಹೋಗಬಹುದು. ಹಾಗೇ ನಿನ್ನ ಸಂತತಿ ಆದ ಸಣ್ಣ ಮಕ್ಕಳು ಸಹ ಅಪಘಾತದಿಂದ ಸತ್ತುಹೋಗಬಹುದು ಅಥವಾ ಅಂಗವೈಕಲ್ಯದಿಂದ ಹುಟ್ಟಬಹುದು. ಹೀಗೆ ಬರುವ ನೋವುಗಳೆಲ್ಲ ದೇವರು ನಿನ್ನನ್ನು ಪರೀಕ್ಷಿಸುವುದಕ್ಕೆ ವಿಧಿಸಿದವುಗಳೆಂದು ಹೇಳಬಹುದು. ಎರಡು ವರ್ಷ ವಯಸ್ಸಿರುವ ನಿನ್ನ ಮಗನಿಗೆ ಭಯಂಕರವಾದ ರೋಗ ಬಂದು ಅದು ಎಲ್ಲಿಯೂ ಗುಣವಾಗದೆ ಆ ಬಾಲಕನು ನಿತ್ಯವೂ ನೋವುಪಡುವುದು ದೇವರು ನಿನಗೆ ಇಟ್ಟ ಪರೀಕ್ಷೆ. ನಿನ್ನನ್ನು ಪರೀಕ್ಷಿಸುವುದಕ್ಕೆ ನಿನ್ನ ಸುತ್ತ ಇರುವ ವ್ಯಕ್ತಿಗಳನ್ನಾಗಲಿ, ಆಸ್ತಿಗಳನ್ನಾಗಲಿ, ಸೌಕರ್ಯಗಳನ್ನಾಗಲಿ ದೇವರು ಬಳಸಿಕೊಳ್ಳುವನು. ಅಷ್ಟು ದೊಡ್ಡ ದೇವರೇ ಒಬ್ಬ ಮನುಷ್ಯನನ್ನು ಪರೀಕ್ಷಿಸುವುದಕ್ಕೆ ಮುಗ್ಧನಾದ ಅವನ ಮಗನನ್ನು ರೋಗಗ್ರಸ್ತನನ್ನಾಗಿಯೋ, ಅಂಗವಿಕಲನನ್ನಾಗಿಯೋ ಮಾಡುವಾಗ, ಅದು ಸಮಂಜಸ ಕಾರ್ಯವೇ ಆದಾಗ, ನಾವು ಅಮೆರಿಕಾದವನನ್ನು ಪರೀಕ್ಷಿಸುವುದಕ್ಕೆ ಅಥವಾ ಬದಲಾಯಿಸುವುದಕ್ಕೆ ಮುಗ್ಧನಾದ ಆ ದೇಶದ ಪೌರನನ್ನು ಸಾಯಿಸುವುದರಲ್ಲಿ ತಪ್ಪೇನೂ ಇಲ್ಲವಲ್ಲವೆ!" ಎಂದು ವಿವರವಾಗಿ ಹೇಳಿದನು.

ಆತನು ದೊಡ್ಡ ಗ್ರಂಥದೊಳಗಿನ ವಾಕ್ಯವನ್ನು ತೆಗೆದುಕೊಂಡು ಉದಾಹರಣೆಯೊಂದಿಗೆ ವಿವರಿಸಿದಾಗ ಆತನ ಮಾತಿಗೆ ಬದುಲಾಗಿ ಏನೂ ಹೇಳದೇ ಹೋದೆನು. ಆದರೆ ದೇವರು ಈ ರೀತಿ ಹೇಳಿರಬಹುದೇ ಎನ್ನುವ ಅನುಮಾನ ಬಂದಿರುವುದರಿಂದ 16-05-2010ನೇ ದಿನದಂದು ನನಗೆ ಪರಿಚಯವಿದ್ದ ಇಸ್ಲಾಮ್ ಮತ ಹಿರಿಯರಾದ, ದೇವರನ್ನು ಕುರಿತು ಬಹಳ

ದೊಡ್ಡ ಭಾಷಣಗಳನ್ನು ಮಾಡುವ ಪಂಡಿತರಾದ ಇಬ್ಬರು ವ್ಯಕ್ತಿಗಳ ಹತ್ತಿರಕ್ಕೆ ಹೋಗಿ, ಒಬ್ಬ ವ್ಯಕ್ತಿ ಪವಿತ್ರ ಖುರಾನ್‌ನ ವಾಕ್ಯ ಹೀಗಿದೆಯೆಂದು ವಿವರವಾಗಿ ಹೇಳಿದ್ದಾನೆ. ಆದರೂ ಈ ವಾಕ್ಯದಲ್ಲಿ ನನಗೆ ಸ್ವಲ್ಪ ಸಂಶಯವಿದೆ. ಅದನ್ನು ಕುರಿತು ನೀವು ವಿವರವಾಗಿ ಹೇಳಿರಿ" ಎಂದು ಕೇಳಿದೆನು. ಆಗ ಅವರು ಹೀಗೆ ಕೇಳಿದರು.

**ಹದೀಸು ಜ್ಞಾನಿಗಳು**:– ದಿವ್ಯ ಖುರಾನ್‌ನಲ್ಲಿ ಯಾವ ಸುರಾದಲ್ಲಿನ ವಾಕ್ಯ?

**ನಾನು** :– ಸುರಾ ಅನ್‌ಫಾಲ್, ಆಯತ್ 28

**ಹದೀಸು ಜ್ಞಾನಿಗಳು** :– ಅದರಲ್ಲಿ ದೇವರು ಮನುಷ್ಯನನ್ನು ಯಾವ ವಿಧದಲ್ಲಾದರೂ ಪರೀಕ್ಷಿಸಬಹುದೆಂದು ತಿಳಿದುಬಂದಿದೆ. ಇದರಲ್ಲಿ ನಿನಗೆ ಏನು ಅರ್ಥವಾಗಿಲ್ಲ?

**ನಾನು** :– ದೇವರು ಹೇಳಿದ ವಾಕ್ಯದಲ್ಲಿ ನನಗೆ ಯಾವುದೇ ಸಂಶಯವಿಲ್ಲ. ಏಕೆಂದರೆ ಖುರಾನ್ ಗ್ರಂಥದಲ್ಲಿ ಹೇಳಲಾದ ದೇವರ ಸಂದೇಶ, ದೇವರು ಕಳುಹಿಸಿದ ಮಾತು ಸತ್ಯವಾದದ್ದು. ಬಂದಿರುವ ಅನುಮಾನವೆಲ್ಲ ಆ ವಾಕ್ಯವನ್ನು ಸರಿಯಾಗಿ ಅರ್ಥ ಮಾಡಿಕೊಂಡಿದ್ದೇವೆಯೇ ಇಲ್ಲವೇ ಎಂದೆ, ನಾನು ಖುರಾನ್ ದೈವಗ್ರಂಥವನ್ನು ವಿಶ್ವಾಸದಿಂದ ಎಲ್ಲವು ಆಗದಿದ್ದರೂ ಸ್ವಲ್ಪ ಮಟ್ಟಿಗಾದರೂ ಓದಿದ್ದೇನೆ. ಅದರಲ್ಲಿ ನನಗೆ ಅರ್ಥವಾಗಿರುವುದಕ್ಕೂ, ಅವರು ಹೇಳಿರುವುದಕ್ಕೂ ಸ್ವಲ್ಪ ವ್ಯತ್ಯಾಸವಿದೆ. ಇದೇ ವಿಷಯವನ್ನು ಕುರಿತು ನಾನು ಓದಿದ 29ನೇ ಸುರಾ ಅನ್‌ಕಬೂತ್‌ನಲ್ಲಿ 2ನೇ ಆಯತ್‌ನಲ್ಲಿ ಹೀಗಿದೆ. "ನಾವು ದೈವವನ್ನು ವಿಶ್ವಾಸಿಸಿದ್ದೇವೆಂದು ಜನರು ಅಂದಮಾತ್ರಕ್ಕೆ ತಾವು ಬಿಟ್ಟುಬಿಡುತ್ತೇವೆಂದು, ತಾವು ಪರೀಕ್ಷಿಸಲ್ಪಡುವುದಿಲ್ಲವೆಂದು ಭಾವಿಸುತ್ತೀರಾ" ಎಂದು ಇದೆ. ಇಲ್ಲಿ "ಪರೀಕ್ಷೆ" ಎನ್ನುವ ಪದ ಬಂದರೂ ಅದು ಯಾವ ಅರ್ಥವನ್ನು ಹೊಂದಿದೆಯೊ ಸ್ವಲ್ಪ ತಿಳಿದುಬಂದಿದೆ. ದೈವದ ಮೇಲೆ ವಿಶ್ವಾಸವಿಲ್ಲದ ಜಾಗದಲ್ಲಿ ಪರೀಕ್ಷಿಸುವುದು ಬೇರೆ ಅರ್ಥವನ್ನು ಕೊಡಬಹುದು. ಆದರೆ ದೈವದ ಮೇಲೆ ವಿಶ್ವಾಸವಿರುವ

ಜಾಗದಲ್ಲಿ ಪರೀಕ್ಷಿಸುವುದು ವಿಶೇಷಾರ್ಥದಿಂದ ಕೂಡಿಕೊಂಡಿದೆ. ಇದೇ ವಿಷಯಕ್ಕೆ ಸಂಬಂಧಿಸಿದ್ದು ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ 22ನೇ ಶ್ಲೋಕ ಹೇಳಿದಾಗ ಎಲ್ಲಾ ಹಿಂದುಗಳು ಅದನ್ನು ಅರ್ಥ ಮಾಡಿಕೊಳ್ಳದೆ ಅಪಾರ್ಥ ಮಾಡಿಕೊಂಡಿದ್ದಾರೆ. ಆ ಶ್ಲೋಕಕ್ಕೆ ಅರ್ಥವನ್ನು ಬರೆದ ಸ್ವಾಮೀಜಿಗಳು ದೇವರು ಹೇಳಿದ ಮಾತಿಗೆ ವಿರುದ್ಧ ಅರ್ಥವನ್ನು ಬರೆದಿದ್ದಾರೆ. ಅವರು ಬರೆದಿರುವುದು ನೂರಕ್ಕೆ ನೂರು ಪಾಲು ಅಸತ್ಯವಾದರೂ, ಅದನ್ನು ಅವರು ಯಾವುದೇ ವಿಧದಲ್ಲಿ ಯೋಚಿಸದೆ ಸತ್ಯವೇ ಎಂದು ಕೊಂಡಿದ್ದಾರೆ. ಭಗವದ್ಗೀತೆಯಲ್ಲಿ ಒಂದು ಶ್ಲೋಕವನ್ನೇ ಅಲ್ಲದೆ ವಿವರಿಸಿ ತೋರಿಸಿದರೆ ಅನೇಕ ಶ್ಲೋಕಗಳಿಗೆ ಭಾವದೋಷ ಏರ್ಪಟ್ಟಿದೆ. ಹೇಳಿದ ಆಧ್ಯಾತ್ಮಿಕದವರೆಲ್ಲರೂ ಕೆಸರಿನಲ್ಲಿ ಕಾಲು ಹಾಕುವುದಲ್ಲದೆ, ತಾವು ತಪ್ಪು ಮಾಡಿದ್ದೇವೆಂದು ಗುರುತಿಸುವುದಕ್ಕೂ ಸಹ ಅವಕಾಶವಿಲ್ಲದಂತೆ ಮಾಯೆ ಮಾಡಿದೆ. ಹಾಗೆ ಸ್ವಲ್ಪ ಬೈಬಲ್‌ನಲ್ಲೂ, ಸ್ವಲ್ಪ ಖುರಾನ್‌ನಲ್ಲಿಯೂ ಪ್ರವಕ್ತ ಹೇಳಿರುವುದನ್ನು ಜನರು ಸರಿಯಾಗಿ ಅರ್ಥ ಮಾಡಿಕೊಳ್ಳದೆ ಹೋಗಿದ್ದಾರೆಂದು ಕೊಂಡಿದ್ದೇನೆ.

ಪ್ರವಕ್ತರು ಹೇಳಿದ ಭಾವವನ್ನು ಎಲ್ಲರೂ ಸರಿಯಾಗಿ ಅರ್ಥ ಮಾಡಿಕೊಂಡಿಲ್ಲ ಎನ್ನುವುದಕ್ಕೆ ಉದಾಹರಣೆಯಾಗಿ ಒಂದು ವಿಷಯವನ್ನು ಗಮನಿಸೋಣ. "ಆದರ್ಶ ಮಹಿಳೆ ಹಜ್ರತ್ ಆಯಿಷಾ" ಎನ್ನುವ ಪುಸ್ತಕದಲ್ಲಿ ಒಂದು ಕಡೆ 141ನೇ ಪುಟದಲ್ಲಿ ಹೀಗೆ ಬರೆಯಲಾಗಿದೆ. "ಹಜ್ರತ್ ಅಬೂ ಸಯಾದ್ ಖುದರಿ ಪ್ರಾಣ ಹೋಗುತ್ತಿರುವಾಗ ಹೊಸ ಬಟ್ಟೆಗಳನ್ನು ತರಿಸಿಕೊಂಡು ಹಾಕಿಕೊಂಡಿದ್ದಾನೆ. ಕಾರಣ ಕೇಳಿದರೆ "ಮುಸ್ಲಿಂ ಯಾವ ಬಟ್ಟೆಯಲ್ಲಿ ಮರಣಿಸಿದರೆ ಆ ಬಟ್ಟೆಯಲ್ಲಿಯೇ ಹುಟ್ಟುತ್ತಾನೆ" ಎಂದು ಆತನು ಹೇಳಿದನು. ಹಜ್ರತ್ ಆಯಿಷಾಗೆ ಈ ವಿಷಯ ತಿಳಿಯಿತು. "ಓ ಪ್ರಭೂ! ಅಬೂ ಸಯದ್ ಮೇಲೆ ದಯೆತೋರು. ಬಟ್ಟೆಗಳು ದೈವಪ್ರವಕ್ತ ದೃಷ್ಠಿಯಲ್ಲಿ ಕರ್ಮಗಳು (ಆಚರಣೆಗಳು) ಎಂಬ ಭಾವನೆ. ಪ್ರಜೆಗಳು ಖಿಯಾಮತ್ ದಿನ ನಗ್ನ ಶರೀರದಿಂದ, ತಲೆಯಿಂದ ಕಾಲಿನವರೆಗೂ

ಅನಿಚ್ಛಾದೀನ ಶರೀರಗಳಿಂದ ಏಳಲ್ಪಡುತ್ತಾರೆಂದು ದೈವ ಪ್ರವಕ್ತ ಸ್ಪಷ್ಟವಾಗಿ ಹೇಳಿದ್ದಾರೆ" ಎಂದು ಮಹಮ್ಮದ್ ಪ್ರವಕ್ತರವರ ನಾಲ್ಕನೇ ಹೆಂಡತಿ ಹಜ್ರತ್ ಆಯಿಷಾರವರು ಹೇಳಿದ್ದಾರೆ. ಈ ಸಂಗತಿಯನ್ನು ಅನುಸರಿಸಿ ನೋಡಿದರೆ ಮಹಾಪ್ರವಕ್ತರ ಭಾವನೆ ಒಂದಾದರೆ ಪ್ರವಕ್ತ ಇರುವ ಕಾಲದಲ್ಲಿಯೇ ಅದನ್ನು ಬೇರೆ ವಿಧವಾಗಿ ಅರ್ಥ ಮಾಡಿಕೊಂಡಿರುವವರಿರುವಾಗ, ಈಗ ಆ ವಿಧದಲ್ಲಿಯೇ ಕೆಲವು ವಾಕ್ಯಗಳನ್ನು ಅರ್ಥ ಮಾಡಿಕೊಳ್ಳುವುದರಲ್ಲಿ ಕೆಲವರು ತಪ್ಪು ಮಾಡಿರಬಹುದಲ್ಲವೇ!

**ಹದೀಸು ಜ್ಞಾನಿಗಳು :–** ಎಲ್ಲಾದರೂ ಚಿಕ್ಕ ತಪ್ಪುಗಳು ಇರಬಹುದು. ಆದರೆ ಪೂರ್ತಿ ಭಾವ ಬದಲಾಗುವಷ್ಟು ತಪ್ಪು ಎಲ್ಲಿಯೂ ಕಾಣಿಸುತ್ತಿಲ್ಲ. ಯಾವುದಾದರೂ ಸಂದರ್ಭಾನುಸಾರ ನೋಡಿಕೊಂಡರೆ ಅರ್ಥ ಸರಿಹೋಗುತ್ತದೆ. ಸಂದರ್ಭವನ್ನು ನೋಡದೆ ಹೋದರೆ ಸ್ವಲ್ಪ ಭಾವ ಬದಲಾಗಬಹುದು. ಏನಾದರೂ ಅನುಮಾನ ಬಂದರೆ ಕೇಳಿ ಸಂಶಯವನ್ನು ನಿವೃತ್ತಿ ಮಾಡಿಕೊಳ್ಳ ಬಹುದು. ಚರ್ಚೆಗಳಿಂದ ದೈವಜ್ಞಾನವನ್ನು ಚೆನ್ನಾಗಿ ಅರ್ಥ ಮಾಡಿಕೊಳ್ಳಬಹುದು.

**ನಾನು :–** ಚರ್ಚೆಗಳಿಂದ ದೈವಜ್ಞಾನ ಅನುಮಾನವಿಲ್ಲದೆ ಅರ್ಥವಾಗುತ್ತದೆಂದು ನಾನು ಅಂದುಕೊಳ್ಳುವುದರಿಂದ ದೈವಸಂದೇಶಗಳನ್ನು ಚೆನ್ನಾಗಿ ತಿಳಿದ ನಿಮ್ಮನ್ನು ಕೇಳುತ್ತಿದ್ದೇನೆ. ನೀವು ನನ್ನ ಸಂಶಯಗಳಿಗೆ ಬೇಸರಗೊಳ್ಳದೆ ಉತ್ತರ ಹೇಳುತ್ತೀ ರೆಂದು ಕೋರುತ್ತಿದ್ದೇನೆ. ಮೊದಲ ಪ್ರಶ್ನೆ ಏನೆಂದರೆ! ಮನುಷ್ಯ ಒಂದೇ ಬಾರಿ ಹುಟ್ಟುತ್ತಾನೆಯೇ? ಅಥವಾ ಅನೇಕ ಬಾರಿ ಹುಟ್ಟುತ್ತಾನೆಯೇ?

**ಹದೀಸು ಜ್ಞಾನಿಗಳು :–** ಒಬ್ಬ ಮನುಷ್ಯ ಒಂದೇ ಬಾರಿ ಹುಟ್ಟುವನು, ಒಂದೇ ಬಾರಿ ಸಾಯುವನು. ಅನೇಕ ಬಾರಿ ಹುಟ್ಟುವುದಿಲ್ಲ, ಹಾಗೆ ಸಾಯುವುದಿಲ್ಲ.

**ನಾನು :–** ಇದನ್ನು ದೇವರು ಹೇಳಿದ್ದಾನೆಯೇ ಅಥವಾ ಮನುಷ್ಯ ಹೇಳಿದ್ದಾನೆಯೇ?

**ಹದೀಸು ಜ್ಞಾನಿಗಳು :–** ಇದು ದಿವ್ಯ ಖುರಾನ್ ಗ್ರಂಥದಲ್ಲಿ ದೈವಸಂದೇಶವಾಗಿ ಹಜ್ರತ್ ಮಹಮ್ಮದ್ ಪ್ರವಕ್ತರವರು ಹೇಳಿರುವುದು.

**ನಾನು :–** ಪ್ರವಕ್ತರವರು ಹೇಳಿದ ವಾಕ್ಯ ಸತ್ಯವಾದದ್ದೆಂದು ಪೂರ್ತಿಯಾಗಿ ನಂಬುತ್ತಿದ್ದೇನೆ. ಆದರೆ ಪ್ರವಕ್ತರವರು ಹೇಳಿರುವುದು ದೈವಸಂದೇಶ. ದೈವಸಂದೇಶವು ಎಂದಿಗಾದರೂ ಶಾಸನವಾಗಿ ನಿಂತಿರುತ್ತದೆ. ಶಾಸನ ನಡೆದೇ ನಡೆಯುತ್ತದೆ. ಆದರೆ ನಡೆದ ಪ್ರತ್ಯಕ್ಷ ಘಟನೆಗಳನ್ನು ಅನುಸರಿಸಿ ನೋಡಿದರೆ ಪ್ರವಕ್ತ ಹೇಳಿದ ವಾಕ್ಯವನ್ನು ತಪ್ಪಾಗಿ ನಾವು ಅರ್ಥ ಮಾಡಿಕೊಂಡಿದ್ದೇವೆಂದು ತಿಳಿಯುತ್ತಿದೆ. ಮನುಷ್ಯ ಒಂದೇ ಬಾರಿ ಜನ್ಮಿಸುತ್ತಾನೆ ಅಂದರೆ ಅನೇಕ ಪ್ರಶ್ನೆಗಳು ಬರುತ್ತವೆ, ಕೊನೆಗೆ ಉತ್ತರವಿಲ್ಲದ ಪ್ರಶ್ನೆ ಉಳಿಯುತ್ತದೆ. ಒಂದು ವೇಳೆ ಪ್ರಯತ್ನ ಮಾಡಿ ಉತ್ತರಗಳನ್ನು ಹೇಳಿದರೂ, ಆ ಉತ್ತರಗಳು ಶಾಸ್ತ್ರಬದ್ಧತೆ ಇಲ್ಲದವು ಗಳಾಗಿರುತ್ತವೆ. ಶಾಸ್ತ್ರಬದ್ಧತೆಯಿಲ್ಲದ ಉತ್ತರ ಸತ್ಯವಲ್ಲ. ಆದ್ದರಿಂದ ಪ್ರವಕ್ತರವರು, ಪ್ರಳಯದಲ್ಲಿ ಮತ್ತೆ ಶರೀರದಿಂದಲೇ ಮನುಷ್ಯ ಏಳಲ್ಪಡುತ್ತಾನೆ ಎನ್ನುವ ಮಾತು ಸತ್ಯವೇ ಆದರೆ, ಅದು ಒಂದೇ ಬಾರಿಯೇ, ಅನೇಕ ಬಾರಿಯೇ ಎಂದು ಅರ್ಥ ಮಾಡಿಕೊಳ್ಳುವುದರಲ್ಲಿ ನಾವು ತಪ್ಪು ಮಾಡಿದ್ದೇವೆಂದು ಅನುಮಾನ ಬರುತ್ತದೆ. ಅದನ್ನು ಹಾಗೆ ಬಿಟ್ಟು ಮನುಷ್ಯ ಒಂದೇ ಬಾರಿ ಹುಟ್ಟುತ್ತಿದ್ದಾನೆ ಎಂದು ಅರ್ಥ ಮಾಡಿಕೊಂಡರೆ ತಕ್ಷಣವೇ ಒಂದು ಪ್ರಶ್ನೆ ಹುಟ್ಟುತ್ತದೆ. ಅದೇನೆಂದರೆ! ಮನುಷ್ಯ ಒಂದೇ ಬಾರಿ ಹುಟ್ಟಿ ಪ್ರಳಯದಲ್ಲಿ ಒಂದೇ ಬಾರಿ ಎದ್ದರೆ, ಹಾಗೆ ಎದ್ದ ನಂತರ ಆ ಜೀವನವನ್ನು ಏನೆನ್ನಬೇಕು? ಏಕೆ ಮನುಷ್ಯ ಪ್ರಳಯದಲ್ಲಿ ಏಳುತ್ತಾನೆ?

**ಹದೀಸು ಜ್ಞಾನಿಗಳು :–** ಮನುಷ್ಯ ತನ್ನ ಜೀವನದಲ್ಲಿ ಮಾಡಿಕೊಂಡ ಒಳ್ಳೆಯ ಕೆಲಸಗಳನ್ನು, ಕೆಟ್ಟ ಕೆಲಸಗಳನ್ನು ಪ್ರಳಯ ದಿನದಂದು ಸಮಾಧಿಯಿಂದ ಏಳಿಸಿದಾಗ ದೇವರು ಲೆಕ್ಕ ಹಾಕಿ ಆತನು ಮಾಡಿದ ಕೆಲಸಗಳನ್ನನುಸರಿಸಿ ಸ್ವರ್ಗ ನರಕಗಳಿಗೆ ಕಳುಹಿಸುವನು. ಅದನ್ನು ಮರಣದ ನಂತರ ಜೀವನ ಎನ್ನುತ್ತೇವೆ. ಮನುಷ್ಯ ಮಾಡಿಕೊಂಡ ಕರ್ಮಲಿಖಿತವನ್ನು ಅನುಸರಿಸಿ ಸ್ವರ್ಗ ನರಕಗಳನ್ನು ಮನುಷ್ಯ ಅನುಭವಿಸುವುದಕ್ಕೆ ಏಳಲ್ಪಡುತ್ತಾನೆ.

**ನಾನು :–** ಒಬ್ಬ ಮನುಷ್ಯ ತನ್ನ ಜೀವನದಲ್ಲಿ ಮಾಡಿಕೊಂಡ ಕೆಲಸಗಳನ್ನು

ಅನುಸರಿಸಿ (ಕರ್ಮವನ್ನು ಅನುಸರಿಸಿ) ಪಾಪಪುಣ್ಯಗಳನ್ನು ಅನುಸರಿಸಿ ಎರಡನೇ ಜೀವನದಲ್ಲಿ ಅಥವಾ ಮರಣಾನಂತರ ಸ್ವರ್ಗ ನರಕಗಳನ್ನು (ಸುಖ ದುಃಖಗಳನ್ನು) ಅನುಭವಿಸುವುದಕ್ಕೆ ಹುಟ್ಟುತ್ತಾನೆ. ಅಥವಾ ಮತ್ತೆ ಸಮಾಧಿಯಿಂದ ಏಳುತ್ತಾನೆ. ಇದೆಲ್ಲಾ ಸತ್ಯವೆ. ಆ ಮರಣದ ನಂತರ ಆ ಜೀವನ ಎಲ್ಲಿ ನಡೆಯುತ್ತಿದೆ ಎಂದು ಪ್ರಶ್ನಿಸಿದರೆ ಸ್ವರ್ಗದಲ್ಲಿ, ನರಕದಲ್ಲಿ ಎಂದು ಉತ್ತರ ಬರುತ್ತದೆ. ಆ ಸ್ವರ್ಗ ನರಕಗಳು ಭೂಮಿ ಮೇಲೆ ಇವೆಯೇ ಇಲ್ಲವೇ ಎಲ್ಲಾದರೂ ಇವೆಯೇ ಎಂದು ಪ್ರಶ್ನಿಸಿದರೆ ಇದಕ್ಕೆ ಸರಿಯಾದ ಉತ್ತರವಾಗಲಿ, ಶಾಸ್ತ್ರಬದ್ಧತೆಯಿಂದ ಕೂಡಿಕೊಂಡ ಉತ್ತರವಾಗಲಿ ಏನೂ ಇಲ್ಲ. ಯಾರೂ ಅವುಗಳನ್ನು ಎಲ್ಲೋ ನೋಡಿದ್ದಾರೆ ಎನ್ನುವ ಆಧಾರಗಳು ಸಹ ಇಲ್ಲ. ಹಾಗೆಂದು ಸ್ವರ್ಗ ನರಕಗಳು ಸತ್ಯವಲ್ಲವೇ ಅಂದರೆ ಸ್ವರ್ಗನರಕಗಳೆನ್ನುವ ಮಾತುಗಳು ದೇವರಿಂದ ಹೇಳಲ್ಪಟ್ಟಿವೆ. ಆದ್ದರಿಂದ ಅವು ಪೂರ್ತಿ ಸತ್ಯವಾದವುಗಳು. ಆದರೆ ಅವುಗಳನ್ನು ಕುರಿತು ನಾವು ಸಂಪೂರ್ಣವಾಗಿ ಅರ್ಥ ಮಾಡಿಕೊಂಡಿಲ್ಲವೆಂದು ಹೇಳುತ್ತಿದ್ದೇವೆ. ದೇವರು ಹೇಳಿದ ಸ್ವರ್ಗನರಕಗಳನ್ನು ಮನುಷ್ಯ ತಪ್ಪದೆ ಅನುಭವಿಸುತ್ತಿದ್ದರೂ ಅವು ಎಲ್ಲೋ ಇವೆಯೆಂದು ಹೇಳಿಕೊಳ್ಳುವುದು ತಪ್ಪು. ಮನುಷ್ಯನಿಗೆ ಪ್ರಳಯದ ನಂತರ ಅವನು ಸಮಾಧಿಯಿಂದ ಎದ್ದ ಮರಣಾನಂತರ ಜೀವನವನ್ನು ಸ್ವರ್ಗ ನರಕ ರೂಪಗಳಲ್ಲಿ (ಸುಖದುಃಖ ರೂಪದಲ್ಲಿ) ಭೂಮಿಯ ಮೇಲೆಯೇ ಅನುಭವಿಸುತ್ತಿದ್ದಾನೆನ್ನುವ ಸತ್ಯವನ್ನು ಮನುಷ್ಯ ತಿಳಿಯದೆ ಹೋಗಿದ್ದಾನೆ. ಎಂದು ನಾವು ಅಂದುಕೊಳ್ಳುತ್ತಿದ್ದೇವೆ. ಈ ವಿಧದಲ್ಲಾದರೆ ಭವಿಷ್ಯತ್ತಿನಲ್ಲಿ ಪ್ರಶ್ನೆಗಳು ಬರುವುದಿಲ್ಲ. ಅಷ್ಟೇ ಅಲ್ಲದೇ ದೇವರ ಮಾತು ಭಂಗವಾಗದೆ ನೆರವೇರಲ್ಪಡುತ್ತ ದೆಂದು ಅಂದುಕೊಳ್ಳುತ್ತೇನೆ.

**ಹದೀಸು ಪಂಡಿತರು** :– ಹಾಗಲ್ಲ. ಸ್ವರ್ಗ ನರಕ ಲೋಕಗಳಿವೆ. ಭೂಮಿಯಮೇ ಲಿಲ್ಲ. ಮನುಷ್ಯ ಮಾಡಿಕೊಂಡಿರುವುದರ ಫಲವಾಗಿ ಅವನು ಸ್ವರ್ಗಕ್ಕೆ, ನರಕಕ್ಕೆ ಕಳುಹಿಸಲ್ಪಡುವನು. ಆ ವಿಧವಾಗಿ ಪ್ರಳಯದಲ್ಲಿ ದೇವರು ಮನುಷ್ಯನ ತಪ್ಪುಗಳೆಲ್ಲವನ್ನು ಲೆಕ್ಕ ಹಾಕಿ ಅದನ್ನು ಅನುಸರಿಸಿ ತೀರ್ಪು ಕೊಟ್ಟು ಸ್ವರ್ಗ

ನರಕಗಳಿಗೆ ಕಳುಹಿಸುವನು. ಅಲ್ಲಿಯವರೆಗೆ ಸತ್ತುಹೋದವನು ಸಮಾಧಿಯಲ್ಲಿ ಇರಬೇಕಾದದ್ದೆ.

**ನಾನು** :– ನೀವು ಹೇಳಿದ ಹಾಗೆ ಒಬ್ಬ ಮನುಷ್ಯ ಸತ್ತುಹೋದ ನಂತರ ಪ್ರಳಯದ ವರೆಗೂ ಸಮಾಧಿಯಲ್ಲಿದ್ದು ಪ್ರಳಯದಲ್ಲಿ ದೇವರಿಂದ ಸಮಾಧಿಯಿಂದ ಶರೀರದೊಂದಿಗೆ ಏಳಲ್ಪಟ್ಟು ಸ್ವರ್ಗನರಕಗಳಿಗೆ ಕಳುಹಿಸಲ್ಪಡುವನು ಎಂದು ಅಂದುಕೊಂಡರೆ, ಅದು ಪೂರ್ತಿ ಜೀವನವನ್ನು ಕಳೆದು ಸತ್ತುಹೋದ ವ್ಯಕ್ತಿಗೆ ನೀವು ಹೇಳಿದ ಭಾವನೆಯ ಪ್ರಕಾರ ನಡೆಯಬಹುದು. ಹಾಗಲ್ಲದೆ ಹುಟ್ಟಿದ ವ್ಯಕ್ತಿ ಪೂರ್ತಿ ಜೀವನವನ್ನು ಕಳೆಯದ ಮೊದಲೇ ನಾಲ್ಕು ವರ್ಷಗಳಿಗೆ ಸತ್ತು ಹೋಗುವುದು ಸಹ ನಡೆಯುತ್ತಿದೆ. ಅಷ್ಟೇ ಅಲ್ಲದೆ ಒಂದು ತಿಂಗಳ ದಿನಗಳಿಗೆ ಸತ್ತುಹೋಗುವ ಚಿಕ್ಕಮಕ್ಕಳಿದ್ದಾರೆ. ಹಾಗೆ ಯುಕ್ತವಯಸ್ಸು ಬಾರದೆ, ವಿವಾಹವಾಗದೆ ಸಾಯುವವರಿದ್ದಾರೆ. ಒಂದು ವರ್ಷದಲ್ಲಿ ಸತ್ತುಹೋದ ಮಕ್ಕಳಾಗಲಿ, ಒಂದು ತಿಂಗಳಿಗೆ ಸತ್ತುಹೋಗುವ ಮಕ್ಕಳಿಗಾಗಲಿ ಲೆಕ್ಕ ಹಾಕುವುದಕ್ಕೆ ಯಾವುದೇ ಪಾಪಪುಣ್ಯಗಳಿರುವುದಿಲ್ಲ. ಆಗ ಪ್ರಳಯಕಾಲದಲ್ಲಿ ಸಮಾಧಿಯಿಂದ ಏಳಲ್ಪಟ್ಟು ಸ್ವರ್ಗಕ್ಕೆ ಕಳುಹಿಸಲ್ಪಡುತ್ತಾರಾ? ನರಕಕ್ಕೆ ಕಳುಹಿಸಲ್ಪಡುತ್ತಾರಾ? ಬಹುಶಃ ಈ ಪ್ರಶ್ನೆಗಳಿಗೆ ಉತ್ತರ ಇರುವುದಿಲ್ಲ. ಅಷ್ಟೇ ಅಲ್ಲದೆ ಮರಣದ ನಂತರ ಸ್ವರ್ಗ ನರಕಗಳ ಕಥೆ ಪಕ್ಕಕ್ಕಿಟ್ಟರೆ ಪ್ರಸ್ತುತ ಜೀವನದಲ್ಲಿ ಒಂದು ವರ್ಷ ವಯಸ್ಸಿನ ಚಿಕ್ಕ ಬಾಲಕನಿಗೆ ಭಯಂಕರವಾದ ರೋಗ ಬಂದು ನೋವು ಪಡುತ್ತಿದ್ದಾನೆ. ಎಲ್ಲೋ ಇದೆಯೆನ್ನುವ ನರಕ ಹೇಗಿದೆಯೋ ನಾವು ನೋಡಿಲ್ಲ ಆದರೆ, ಒಂದು ವರ್ಷದ ಬಾಲಕ ರೋಗದಿಂದ ಅನುಭವಿಸುವ ನೋವು ಪ್ರತ್ಯಕ್ಷ ನರಕವಾಗಿ ಕಾಣಿಸುತ್ತಿದೆ. ಇದನ್ನು ನೋಡಿದ ನಂತರ ಅದು ನರಕವಲ್ಲವೇ ಎನ್ನಿಸುತ್ತದೆ. ಯಾರಿಗಾದರೂ ಶಿಕ್ಷೆ ಇದೆ ಅಂದರೆ ಅದು ತಪ್ಪು(ಪಾಪ) ಮಾಡಿದ್ದರೇನೆ ಎಂದು ಅರ್ಥವಾಗುತ್ತದೆ. ಈಗ ಒಂದು ವರ್ಷದ ಬಾಲಕನು ಎರಡು ವರ್ಷಗಳ ತನಕ ರೋಗದಿಂದ ನೋವನ್ನು ಅನುಭವಿಸಿ ದೀನನಾಗಿ ಸತ್ತುಹೋದ. ಅವನ ಜೀವನದಲ್ಲಿ ಒಳ್ಳೆಯ ಕೆಲಸಗಳನ್ನೂ ಮಾಡಲಿಲ್ಲ ಮತ್ತು

ಕೆಟ್ಟ ಕೆಲಸಗಳನ್ನೂ ಮಾಡಲಿಲ್ಲ. ಅಂತಹವನನ್ನು ಪ್ರಳಯದಲ್ಲಿ ಸಮಾಧಿಯಿಂದ ಏಳಿಸಿ ದೇವರು ಆತನನ್ನು ಏನೆಂದು ವಿಚಾರಿಸುವನು? ಆತನನ್ನು ಸ್ವರ್ಗಕ್ಕೆ ಕಳುಹಿಸುವನಾ? ನರಕಕ್ಕೆ ಕಳುಹಿಸುವನಾ? ಬಹುಶಃ ಇದಕ್ಕೂ ಸಹ ಉತ್ತರ ಇರುವುದಿಲ್ಲ. ಅಷ್ಟೇ ಅಲ್ಲದೆ ಅಷ್ಟು ಚಿಕ್ಕ ಹುಡುಗನಿಗೆ ಭಯಂಕರ ರೋಗ ಬಂದು ಆ ಬಾಲಕನು ನನ್ನನ್ನು ರಕ್ಷಿಸುವವರು ಇಲ್ಲವೆ ಎನ್ನುವ ಹಾಗೆ ದೀನನಾಗಿ ನೋಡುತ್ತಾ ಅಳುತ್ತಿದ್ದರೆ, ಪಕ್ಕದಲ್ಲಿ ನೋಡುವವರಿಗೆ ಹೃದಯ ವಿಷಾದಕರ ವಾಗಿದ್ದು, ಈ ಹುಡುಗನು ಏನು ತಪ್ಪು ಮಾಡಿದ್ದಾನೆಂದು ಈ ರೋಗ ಬಂದಿದೆ. ದೇವರನ್ನು ಅನಂತ ಕರುಣಾಮಯಿ ಎನ್ನುತ್ತಾರೆಯೇ, ಹುಟ್ಟಿದಂದಿನಿಂದ ಯಾವ ಪಾಪ ಮಾಡದ ಚಿಕ್ಕ ಮಗುವಿಗೆ ರೋಗ ಬಂದು ನೋವುಪಡುತ್ತಿದ್ದರೆ, ತಾಯಿತಂದೆಯರು ದೇವರನ್ನು ತಮ್ಮ ಮಗ ಚೆನ್ನಾಗಿ ಆಗಬೇಕೆಂದು ಎಷ್ಟು ಬೇಡಿಕೊಂಡರೂ ದೇವರು ಆ ಮಗುವಿನ ಮೇಲೆ ತನ್ನ ಅನಂತವಾದ ಕರುಣೆಯಲ್ಲಿ ಸ್ವಲ್ಪ ಕರುಣೆಯನ್ನಾದರೂ ತೋರಿಸಬಹುದಲ್ಲವೆ! ಎಷ್ಟೋ ಜನ ದುಷ್ಟರು ಅವರಿಗೆ ಇಷ್ಟ ಬಂದ ಹಾಗೆ ಕೆಟ್ಟ ಕೆಲಸಗಳನ್ನು ಮಾಡುತ್ತಾ ಹಾಯಾಗಿರುವವರನ್ನು ಸ್ವಲ್ಪವಾದರೂ ಶಿಕ್ಷಿಸದೆ ಹೋದರೂ ಪರವಾಗಿಲ್ಲ. ಆದರೆ ಚಿಕ್ಕ ಹುಡುಗನನ್ನು ರಕ್ಷಿಸಬಹುದಲ್ಲವೇ! ಎಂದು ಜನರೆನ್ನುತ್ತಾರೆ ಈ ವಿಷಯವನ್ನು ತಿಳಿದ ಹಿರಿಯರು ನೀವೇನಂತೀರ.

**ಹದೀಸು ಜ್ಞಾನಿಗಳು :–** ಅದು ದೇವರು ಆ ಬಾಲಕನ ತಂದೆತಾಯಿಗಳನ್ನು ದೇವರ ಮಾರ್ಗದಲ್ಲಿ ಎಷ್ಟರಮಟ್ಟಿಗೆ ಇದ್ದಾರೋ ಎಂದು ಪರೀಕ್ಷಿಸುವುದಕ್ಕೆ ಮಾಡಿದ ಪರೀಕ್ಷೆ ಎಂದು ಹೇಳಬಹುದು. ಅನ್‌ಫಾಲ್ ಸುರಾದಲ್ಲಿ 28ನೇ ಆಯತ್‌ನಲ್ಲಿ ಹೇಳಿದಂತೆ "ನಿಜಕ್ಕೂ ನಿಮ್ಮ ಆಸ್ತಿಪಾಸ್ತಿಗಳು, ನಿಮ್ಮ ಸಂತಾನವು ನಿಮ್ಮನ್ನು ಪರೀಕ್ಷಿಸುವ ಸಾಧನೆಗಳೆಂದು, ನಿಶ್ಚಯವಾಗಿ ಅಲ್ಲಾ ಹತ್ತಿರ ದೊಡ್ಡ ಪ್ರತಿಫಲ ಇದೆಯೆಂದು ತಿಳಿದುಕೊಳ್ಳಿ." ಎಂದು ಇರುವುದನ್ನು ಅನುಸರಿಸಿ ನೋಡಿದರೆ ದೇವರು ತಾಯಿತಂದೆಯರನ್ನು ಪರೀಕ್ಷಿಸುವ ನಿಮಿತ್ತವಾಗಿ ಮಕ್ಕಳಿಗೆ ರೋಗವನ್ನು ಕಲ್ಪಿಸಬಹುದು. ಅದರಿಂದ ತಾಯಿತಂದೆಯರ ಸ್ಪಂದನ ದೇವರ

ಬಗ್ಗೆ ಹೇಗಿರುತ್ತದೋ ತಿಳಿಯುವುದು. ಹುಡುಗನಿಗೆ ರೋಗ ಬರುವುದು ತಾಯಿ ತಂದೆಯರ ಪರೀಕ್ಷೆಗಾಗಿಯೇ ಹೊರತು ಬೇರೆಯಲ್ಲ.

**ನಾನು:–** ಪರೀಕ್ಷೆ ಎನ್ನುವ ಪದ ಅನ್‌ಫಾಲ್ ಸುರಾದಲ್ಲಿಯೇ ಅಲ್ಲದೆ ಅಲ್‌ಬಖರಾ ಸುರಾದಲ್ಲಿ 155ನೇ ಆಯತ್‌ನಲ್ಲಿ ಸಹ ಹೀಗೆದೆ. "ನಿಶ್ಚಯವಾಗಿ ನಿಮ್ಮನ್ನು ಭಯ ಅಪಘಾತಗಳಿಗೆ, ಹಸಿವು ನೋವುಗಳಿಗೆ, ಧನ, ಪ್ರಾಣ, ಆದಾಯಗಳ ನಷ್ಟಗಳಿಗೆ ಗುರಿ ಮಾಡಿ ಪರೀಕ್ಷಿಸುತ್ತೇವೆ" ಎಂದೂ ಸಹ ಇದೆ. ಇಲ್ಲಿ ಹೇಳಿರುವುವೆಲ್ಲ ವಾಸ್ತವವೇ. ಯಾವಾಗ ಏತಕ್ಕಾಗಿ ಪರೀಕ್ಷಿಸುತ್ತಾನೆನ್ನುವ ವಿಷಯವನ್ನು ಅರ್ಥ ಮಾಡಿಕೊಳ್ಳುವುದರಲ್ಲಿ ತಪ್ಪು ಮಾಡಿದ್ದೇವೆಂದು ನಾನು ಹೇಳುತ್ತಿದ್ದೇನೆ. ದಿವ್ಯ ಖುರಾನ್‌ನಲ್ಲಿನ ದೈವಸಂದೇಶ ವಾಕ್ಯಗಳು ಶಾಸನಗಳು, ನಡೆದೇ ತೀರುವಂತವುಗಳು. ಆದ್ದರಿಂದ ಖುರಾನ್ ದೇವರ ಶಾಸ್ತ್ರವಾಗುತ್ತದೆ. ಅದು ಎಂದಿಗೂ ನಿಜವಾಗುತ್ತದೆ. ನನ್ನ ಆವೇದನೆಯೆಲ್ಲಾ ದೈವ ಸಂದೇಶಗಳನ್ನು ಮಾನವರು ಸರಿಯಾಗಿ ಅರ್ಥ ಮಾಡಿಕೊಳ್ಳದೆ ಹೋಗಿದ್ದಾರೆನ್ನುವುದೇ ಆಗಿದೆ. ಇದೆಲ್ಲಾ ನಾವು ಹೇಳುವುದಕ್ಕೆ ಮುಖ್ಯ ಉದ್ದೇಶ ದೇವರ ವಾಕ್ಯವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಬೇಕೆನ್ನುವುದೇ ಹೊರತು ಬೇರೆಯೇನೂ ಇಲ್ಲ. ಸಹ ವ್ಯಕ್ತಿ ದೇವರಿಗೆ ಸಮೀಪವಾಗಬೇಕೆಂದು, ಮಾಯೆಗೆ ದೂರವಾಗಬೇಕೆಂದು ಮಾಡುವ ಪ್ರಯತ್ನವೇ ಈ ರಚನೆಯ ಸಾರಾಂಶ.

ಈಗ ನಾವು ಹೇಳುವ ಭಾವನೆಯನ್ನು ಜಾಗ್ರತೆಯಿಂದ ಕೇಳಿ ಅರ್ಥ ಮಾಡಿಕೊಳ್ಳುತ್ತೀರೆಂದು ಅಂದುಕೊಳ್ಳುತ್ತಿದ್ದೇವೆ. ದೇವರು ಸಮಸ್ತವನ್ನು ಸರ್ವರನ್ನು ಸೃಷ್ಟಿಸಿದ ಸೃಷ್ಟಿಕರ್ತ. ಅವನಿಗೆ ತಿಳಿಯದಿರುವುದು ಸರ್ವಜಗತ್ತಿನಲ್ಲಿ ಏನೂ ಇಲ್ಲ. ದೇವರು ಎಲ್ಲಾ ಕಡೆ ವ್ಯಾಪಿಸಿದ್ದು ಎಲ್ಲದನ್ನು ಎಲ್ಲರನ್ನು ನೋಡುತ್ತಿದ್ದಾನೆ. ಪ್ರತಿ ಮನುಷ್ಯನೊಳಗೆ ಯಾವ ಗುಣವಿದೆ, ಅವನಿಗೆ ಹೊರಗೆ ಯಾವ ಧನವಿದೆ ಎಲ್ಲಾ ಆತನಿಗೆ(ದೇವರಿಗೆ) ಗೊತ್ತು. ಮನುಷ್ಯ ಹುಟ್ಟುವುದಕ್ಕಿಂತ ಮೊದಲು ಅವನು ಹೀಗೆ ಹುಟ್ಟಿ, ಹೀಗೆ ಬೆಳೆದು, ಹೀಗೆ ತಿರುಗಿ, ಹೀಗೆ ಅನುಭವಿಸಿ, ಹೀಗೆ ಮುದುಕನಾಗಿ, ಹೀಗೆ ಸತ್ತುಹೋಗಬೇಕೆಂದು ನಿರ್ಣಯಿಸಿ ಬರೆದಿಟ್ಟ

ಕರ್ಮವನ್ನು ದೇವರೇ ಮನುಷ್ಯನ ಹಿಂದೆ ಕಳುಹಿಸುತ್ತಾನೆ. **ಕರ್ಮ ಆಚರಣೆ ಪತ್ರವಿಲ್ಲದೆ ಯಾರೂ ಹುಟ್ಟುವುದಕ್ಕೆ ಅವಕಾಶವಿಲ್ಲ. ಅದನ್ನೇ ಹಣೆಬರಹ ಎಂದು ಸಹ ಅನ್ನುತ್ತೇವೆ.** ಇದನ್ನು ಕುರಿತು ಪವಿತ್ರ ಖುರಾನ್ ಗ್ರಂಥದಲ್ಲಿ ಆಲ್ಇನ್‌ಫಿತಾರ್ ಅನ್ನುವ 82 ನೇ ಸುರಾದಲ್ಲಿ 5 ನಂಬರ್ ಆಯತ್‌ನಲ್ಲಿ “ಪ್ರತಿ ವ್ಯಕ್ತಿ ತನ್ನ ಮುಂದೆ ಹಿಂದೆ ಮಾಡಿದ ಕೆಲಸವೇನೋ ತಿಳಿದು ಹೋಗುತ್ತದೆ” ಎಂದಿದೆ. ಅಷ್ಟೇ ಅಲ್ಲದೆ ಇದೇ ವಿಷಯವನ್ನೇ 83ನೇ ಸುರಾ ಆದ ಅಲ್‌ಮುತ ಫ್ಫಿಫೀನ್ ಸುರಾದಲ್ಲಿ 7, 8 ಆಯತ್‌ನಲ್ಲಿ “ನಿಸ್ಸಂದೇಹವಾಗಿ ದುಷ್ಟರ ಆಚರಣೆ ಎಲ್ಲಾ ಕಾರಾಗಾರ ಪಟ್ಟಿಯಲ್ಲಿ ನಮೂದಿಸಲಾಗಿದೆ. ಕಾರಾಗಾರ ಪಟ್ಟಿ ಎಂದರೆ ನಿನಗೇನಾದರೂ ಗೊತ್ತಾ? ಅದೊಂದು ಬರೆದ ಪುಸ್ತಕ” ಎಂದಿದೆ ಮತ್ತು 84ನೇ ಸುರಾ ಆದ ಅಲ್ ಇನ್ಷಿಕಾಕ್‌ನಲ್ಲಿ 10ನೇ ಆಯತ್‌ನಲ್ಲಿ “ಯಾರ ಆಚರಣೆ ಪತ್ರ (ಕರ್ಮಪತ್ರ) ಆತನ ಬೆನ್ನ ಹಿಂದೆ ಕೊಡಲಾಗುತ್ತದೋ” ಎಂದೂ ಸಹ ಇದೆ. ಆಚರಣೆ ಪತ್ರ ಎಂದರೆ ಕೆಲಸಗಳ ನಿರ್ಣಯಪಟ್ಟಿ ಎಂದರ್ಥ. ಆಚರಣೆ ಪತ್ರ ಎಂದರೆ ಪಾಪಗಳ ನಿರ್ಣಯಪಟ್ಟಿ ಅಥವಾ ಪಾಪಗಳ ನಮೂನೆ ಪಟ್ಟಿ ಎಂದು ಹೇಳಬಹುದು. ಆಚರಣೆ ಎಂದರೆ ಕೆಲಸ ಎಂದು ಎಲ್ಲರಿಗೂ ತಿಳಿದಿದೆ. ಮನುಷ್ಯನ ಆಚರಣೆ ಪತ್ರ ಮನುಷ್ಯ ಹುಟ್ಟುವ ಮೊದಲೇ ಇರುವುದೆನ್ನುವುದಕ್ಕೆ 80ನೇ ಅಬಸ ಸುರಾದಲ್ಲಿ 20, 21, 22 ಆಯತ್‌ನಲ್ಲಿ “ದೇವರು ಆತನನ್ನು ವೀರ್ಯಬಿಂದುವಿನಿಂದ ಹುಟ್ಟಿಸಿದ್ದಾನೆ, ಅವನ ಭಾಗ್ಯವನ್ನು ನಿರ್ಣಯಿಸಿದ್ದಾನೆ, ನಂತರ ಅವನ ಜೀವನ ಮಾರ್ಗವನ್ನು ಸುಗಮ ಮಾಡಿದ್ದಾನೆ. ನಂತರ ಮೃತ್ಯುವನ್ನು ಕೊಟ್ಟಿದ್ದಾನೆ, ಸಮಾಧಿಗೆ ಸೇರಿಸಿದ್ದಾನೆ” ಎಂದಿದೆ. ಮನುಷ್ಯನಿಗೆ ಮೃತ್ಯು ಬಾರದ ಮೊದಲೇ, ಅವನು ಸಮಾಧಿಗೆ ಸೇರುವ ಮೊದಲೇ ದೇವರು ಅವನ ಜೀವನ ವಿಧಾನವನ್ನು ನಿರ್ಣಯಿಸಿದ್ದಾನೆಂದು ತಿಳಿಯುತ್ತಿದೆ. ಅಂತಹ ದೇವರಿಗೆ ಮನುಷ್ಯನ ಪ್ರತಿ ಆಚರಣೆಯೂ ಗೊತ್ತು. ಪ್ರಪಂಚದಲ್ಲಿ ಮನುಷ್ಯ ಏನು ಮಾಡಿದ್ದಾನೆ, ಏನು ಮಾಡುತ್ತಿದ್ದಾನೆ, ಏನು ಮಾಡಲು ಹೋಗುತ್ತಿದ್ದಾನೆ ಎನ್ನುವ ವಿಷಯ ಅವನಿಗೆ (ದೇವರಿಗೆ) ಗೊತ್ತು. ಆದರೆ ಅವನ ವಿಷಯ ಮಾತ್ರ ಯಾರಿಗೂ ಗೊತ್ತಿಲ್ಲ. ಇದೇ ವಿಷಯ ಭಗವದ್ಗೀತೆಯ ವಿಜ್ಞಾನಯೋಗದ 26ನೇ ಶ್ಲೋಕದಲ್ಲಿ ಹೀಗಿದೆ.

***ಶ್ಲೋ: ವೇ ದಾಹಾಂ ಸಮತೀತಾನಿ ವರ್ತಮಾನಾನಿ ಚಾರ್ಜುನಾ,***
***ಭವಿಷ್ಯಾಣಿಚ ಭೂತಾನಿ ಮಾಂತು ವೇದ ನ ಕಶ್ಚನ ॥***

**ಭಾವಾರ್ಥ :** "ಸಮಸ್ತ ಜೀವರಾಶಿಗಳಿಗೆ ನಡೆಯುತ್ತಿರುವ ವಿಷಯಗಳು ಮತ್ತು ಮುಂಬರುವ ವಿಷಯಗಳು, ನಡೆದ ವಿಷಯಗಳು ಎಲ್ಲ ನನಗೆ ಗೊತ್ತು, ಆದರೆ ಇಂತಹ ನನ್ನನ್ನು ಮಾತ್ರ ಯಾರೂ ತಿಳಿದಿಲ್ಲ" ಈ ರೀತಿ ದೇವರಿಗೆ ತಿಳಿಯದಿರುವುದೇನೂ ಇಲ್ಲ. ಒಬ್ಬ ಮನುಷ್ಯ ಹುಟ್ಟಿದಂದಿನಿಂದ ಸಾಯುವವರೆಗೂ ಪ್ರಪಂಚದಲ್ಲಿ ಏನು ಮಾಡುತ್ತಿದ್ದಾನೋ, ಏನು ಮಾಡಲು ಹೋಗುತ್ತಿದ್ದಾನೋ ಮೊದಲೇ ದೇವರಿಗೆ ತಿಳಿದಿರುವಾಗ ಅವನನ್ನು ಪರೀಕ್ಷಿಸಬೇಕಾದ ಅವಶ್ಯವಿರುವುದಿಲ್ಲ. ಒಬ್ಬ ವಿದ್ಯಾರ್ಥಿ ಎಲ್ಲಿಯವರೆಗೆ ಓದನ್ನು ಅರ್ಥ ಮಾಡಿಕೊಂಡಿದ್ದಾನೋ ತಿಳಿಯುವುದಿಲ್ಲ, ಆದರೆ ಪರೀಕ್ಷೆ ಇಟ್ಟು ಬರೆದ ಬರವಣಿಗೆಯನ್ನು ಅನುಸರಿಸಿ ಬಂದಿರುವ ಅಂಕಗಳನ್ನು ಅನುಸರಿಸಿ ನೋಡಿದರೆ ಇಲ್ಲಿಯವರೆಗೂ ಕಲಿತಿದ್ದಾನೆಂದು ತಿಳಿದುಕೊಳ್ಳುವರು. ಹಾಲಿನಲ್ಲಿ ನೀರು ಎಷ್ಟಿದೆಯೆಂದು ತಿಳಿಯದಿರುವಾಗ ಒಂದು ಪರಿಕರದಿಂದ ಪರೀಕ್ಷಿಸಿ ಹಾಲಿನ ಅಂಶವನ್ನು ತಿಳಿದುಕೊಳ್ಳುತ್ತಿದ್ದೇವೆ. ಏನಾದರೂ ತಿಳಿಯದಿರುವಾಗ ಪರೀಕ್ಷೆ ಅಗತ್ಯವೇ ಹೊರತು ತಿಳಿದಾಗ ಅಗತ್ಯವಿಲ್ಲ ತಾನೆ! ಒಬ್ಬ ಮನುಷ್ಯನ ವಿಧಾನ, ಅವನ ಮನೋಭಾವ, ಗುಣಭಾವ ತಿಳಿದಾಗ ಅವನನ್ನು ಪರೀಕ್ಷಿಸುವ ಅಗತ್ಯ ಇಲ್ಲದೆ ಇವನು ಇಂತಹವನೆಂದು ಹೇಳಬಹುದು. ಹಾಗೆ ಒಬ್ಬ ಮನುಷ್ಯನ ಕರ್ಮಲಿಖಿತ, ಕಾರ್ಯಾಚರಣೆ, ಗುಣ ಸ್ವಭಾವವನ್ನು ಪೂರ್ತಿಯಾಗಿ ತಿಳಿದ ದೇವರು ಮನುಷ್ಯನನ್ನು ಪರೀಕ್ಷಿಸಬೇಕಾದ ಅಗತ್ಯವಿಲ್ಲ.

ಆದರೇ ಖುರಾನ್‌ನಲ್ಲಿ ಸುರಾ ಬಖರಾ, ಸುರಾ ಅನ್‌ಫಾಲ್‌ನಲ್ಲಿ ಪರೀಕ್ಷಿಸಲ್ಪಡುವುದು ಎಂದು ಬರೆಯಲಾಗಿದೆ ಅಲ್ಲವೇ ಎಂದು ಯಾರಾದರೂ ಕೇಳಬಹುದು. ಅದಕ್ಕೆ ನನ್ನ ಉತ್ತರವೇನೆಂದರೆ! ಮನುಷ್ಯನ ಜೀವನದಲ್ಲಿ ಪ್ರತಿಯೊಂದು ಮೊದಲೇ ಕರ್ಮಲಿಖಿತದಲ್ಲಿ ಇರುವುದೆಂದು ಹೇಳಿಕೊಂಡಿದ್ದೇವಲ್ಲ! ಅವೆಲ್ಲಾ ದೇವರಿಗೆ ತಿಳಿದಿರುತ್ತದೆ ಎಂದು ಸಹ ಹೇಳಿಕೊಂಡಿದ್ದೇವೆ.

ಆದ್ದರಿಂದ ಅವುಗಳನ್ನು ಪರೀಕ್ಷಿಸುವ ಅಗತ್ಯವಿಲ್ಲವೆಂದು ಸಹ ಹೇಳಿದ್ದೇವೆ. ಆದರೆ ಮನುಷ್ಯ ಜೀವನದಲ್ಲಿ ಕರ್ಮಪತ್ರದಲ್ಲಿ ಲಿಖಿಸಿದ ವಿಷಯವೊಂದಿದೆ. ಅದು ಕರ್ಮಪತ್ರಕ್ಕಿಂತ ಅತೀತವಾದ ದೇವರ ಜ್ಞಾನ. ದೇವರ ಜ್ಞಾನ ಮನುಷ್ಯನ ಶ್ರದ್ಧೆಯನ್ನು ಅನುಸರಿಸಿ, ತಿಳಿದುಕೊಳ್ಳಬೇಕೆನ್ನುವ ಆತುರತೆಯನ್ನು ಅನುಸರಿಸಿ ಲಭಿಸುತ್ತದೆ. ಅದು ಜೀವನದಲ್ಲಿ ಮೊದಲು ನಿರ್ಣಯಿಸಿರುವುದಿಲ್ಲ. ಜ್ಞಾನವನ್ನು ಸಂಪೂರ್ಣವಾಗಿ ಸಂಪಾದಿಸಿಕೊಂಡು ಆಚರಿಸಿದವನಿಗೆ ಮೋಕ್ಷ ಲಭಿಸುತ್ತದೆ. ಮೋಕ್ಷ ಎಂದರೆ ಸ್ವರ್ಗವಲ್ಲ, ಸ್ವರ್ಗ ನರಕಗಳಿಗೆ ಅತೀತವಾದ ದೇವರ ಸನ್ನಿಧಾನವನ್ನು ಮೋಕ್ಷ ಎನ್ನುತ್ತೇವೆ. ಇದೇ ಮೋಕ್ಷವನ್ನು ಕುರಿತು ಖುರಾನ್‌ನಲ್ಲಿ 87ನೇ ಸುರಾ ಆದ ಅಲ್‌ಆಲಾಲ್ 17, 18 ಆಯತ್‌ನಲ್ಲಿ "ಪರಲೋಕ ಉತ್ತಮವಾದದ್ದು ಮತ್ತು ಶಾಶ್ವತವಾದದ್ದು. ಈ ಮಾತನ್ನೇ ಪೂರ್ವ ಗ್ರಂಥಗಳಲ್ಲಿ ಬರೆಯಲಾಗಿದೆ." ಸ್ವರ್ಗ ನರಕಗಳು ಶಾಶ್ವತವಾದವುಗಳಲ್ಲ. ಅವು ಪಾಪ ಪುಣ್ಯಗಳನ್ನು ಅನುಸರಿಸಿ ಬಂದು ಹೋಗುತ್ತಿರುತ್ತವೆ. ಪರಲೋಕವೊಂದೇ ಎಲ್ಲದಕ್ಕಿಂತ ಉತ್ತಮವಾದದ್ದು, ಶಾಶ್ವತವಾದದ್ದು. ಈ ದೈವ ಸಾನಿಧ್ಯವಾದ ಪರಲೋಕ (ಮೋಕ್ಷ) ಮನುಷ್ಯನಿಗೆ ಲಭಿಸಬೇಕೆಂದರೆ ಅವನು ಜ್ಞಾನಮಾರ್ಗದಲ್ಲಿ ಒಂದು ಉನ್ನತ ಸ್ಥಾನಕ್ಕೆ ಬೆಳೆಯಬೇಕು. ಆ ಸ್ಥಾನಕ್ಕೆ ಬೆಳೆದವನು ಪರಲೋಕಕ್ಕೆ ಹೋಗುತ್ತಾನೆ. ಜ್ಞಾನಮಾರ್ಗದಲ್ಲಿ ಇಲ್ಲದವನು ಸ್ವರ್ಗ ನರಕಗಳಿಗೆ ಹೋಗುತ್ತಾ ಇರುತ್ತಾನೆ. ಜ್ಞಾನಮಾರ್ಗದಲ್ಲಿ ಸ್ಥಾನವನ್ನು ಮನುಷ್ಯನೇ ಸಂಪಾದಿಸಿಕೊಳ್ಳಬೇಕು. ಪ್ರಪಂಚ ವಿಷಯಗಳ ಹಾಗೆ ಜ್ಞಾನ ನಿರ್ಣಯಿಸಲ್ಪಟ್ಟಿರುವುದಿಲ್ಲ. ಮನುಷ್ಯ ಎಷ್ಟು ಜ್ಞಾನವನ್ನು ಸಂಪಾದಿಸಿಕೊಂಡರೆ ಮೋಕ್ಷ ಹೊಂದುವನು ಎನ್ನುವ ವಿಷಯ ಸಾಮಾನ್ಯ ಮನುಷ್ಯನಿಗೆ ತಿಳಿಯಬೇಕೆಂದರೆ ಮನುಷ್ಯನನ್ನು ಜ್ಞಾನ ವಿಷಯಗಳಲ್ಲಿ ಪರೀಕ್ಷಿಸಬೇಕಾದ್ದೆ. ಪರೀಕ್ಷೆ ಎನ್ನುವುದು ಜ್ಞಾನ ವಿಷಯಗಳಲ್ಲಿ ಅಗತ್ಯವೆಂದು, ಅದು ಸಾಮಾನ್ಯ ಮನುಷ್ಯನಿಗೆ ಮೋಕ್ಷಕ್ಕೆ ಎಷ್ಟು ಜ್ಞಾನ ಸ್ಥಾನ ಅಗತ್ಯವೆಂದು ತಿಳಿಯುವುದಕ್ಕೆ, ಒಬ್ಬ ಮನುಷ್ಯ ಪರೀಕ್ಷಿಸಲ್ಪಡುತ್ತಾನೆಂದು, ಈ ಪರೀಕ್ಷೆಗಳನ್ನೇ ಖುರಾನ್ ಗ್ರಂಥದಲ್ಲಿ ಸಹ ಬರೆಯುವುದು ನಡೆದಿದೆಯೆಂದು ತಿಳಿಯಬೇಕು.

ಮುಖ್ಯವಾಗಿ ಗಮನಿಸಬೇಕಾದ್ದೇನೆಂದರೆ! ದೇವರ ಜ್ಞಾನಕ್ಕೆ ಮಾಯೆ ಕೆಲಸಗಳು (ಕರ್ಮದೊಳಗಿರುವ ಆಚರಣೆಗಳು) ಎಲ್ಲ ಆತಂಕವನ್ನು ಮಾಡುವ ವುಗಳಾಗಿ ಮತ್ತು ವಿರುದ್ಧವಾದವುಗಳಾಗಿ ಇರುವವು. ದೈವಜ್ಞಾನದಲ್ಲಿ ಹೋಗಬೇಕೆಂದುಕೊಂಡವನಿಗೆ ಜೀವನದಲ್ಲಿನ ಕರ್ಮ ಕೆಲಸಗಳೆಲ್ಲ ಆತಂಕವಾಗಿದ್ದು ಜ್ಞಾನಮಾರ್ಗಕ್ಕೆ ಅಡಚಣೆಗಳನ್ನು ಕಲ್ಪಿಸುತ್ತಿರುತ್ತದೆ. ಆ ಅಡಚಣೆಗಳನ್ನು (ಆತಂಕಗಳನ್ನು) ದಾಟಿಹೋಗುವುದೇ ಜ್ಞಾನಮಾರ್ಗ ದಲ್ಲಿರುವವನಿಗೆ ಪರೀಕ್ಷೆಯಂತಹದು. ದೇವರನ್ನು ನಂಬಿದ ಮಾತ್ರಕ್ಕೆ, ದೈವಜ್ಞಾನದ ಮೇಲೆ ಪ್ರಜ್ಞೆ ಇದ್ದ ಮಾತ್ರಕ್ಕೆ ಯಾವನೂ ಕರ್ಮಾಚರಣೆಯಿಂದ ಹೊರಬೀಳ ಲಾರನು, ಅಂತವನಿಗೆ ಕರ್ಮ ಕೆಲಸಗಳೆಲ್ಲ ಪರೀಕ್ಷೆಗಳಾಗಿ ಇರುವವೆಂದು ತಿಳಿಯಬೇಕು. ಇದೇ ವಿಷಯವನ್ನು ಪವಿತ್ರ ಖುರಾನ್ ಗ್ರಂಥದಲ್ಲಿ 29ನೇ ಸುರಾ ಆದ ಅನ್‌ಕಬೂತ್‌ನಲ್ಲಿ 2ನೇ ಆಯತ್‌ನಲ್ಲಿ ಪ್ರಜೆಗಳು “ನಾವು ದೈವವನ್ನು ನಂಬಿದ್ದೇವೆ ಎಂದು ಅಂದಷ್ಟು ಮಾತ್ರಕ್ಕೆ ತಾವು ಬಿಟ್ಟುಬಿಡುತ್ತೇವೆಂದು, ತಾವು ಪರೀಕ್ಷಿಸಲ್ಪಡುವುದಿಲ್ಲವೆಂದು ಭಾವಿಸುತ್ತೀರಾ” ಎಂದು ಹೇಳಲಾಗಿದೆ. ಇದನ್ನು ಅನುಸರಿಸಿ ನೋಡಿದರೆ ಅಲ್ಲಾಹ್‌ನನ್ನು (ದೈವವನ್ನು) ನಂಬಿದವರಿಗೆ, ಅವರ ಕರ್ಮಗಳೇ ಪರೀಕ್ಷೆಗಳಾಗಿ ನಿಲ್ಲುತ್ತವೆಂದು ತಿಳಿಯುತ್ತದೆ. ಕರ್ಮಗಳು ಅಥವಾ ಕರ್ಮಾಚರಣೆಗಳು ಮನುಷ್ಯ ಜೀವನದೊಳಗೆ ಬಾರದ ಮುನ್ನ ನಿರ್ಣ ಯಿಸಲ್ಪಟ್ಟಿರುತ್ತವೆಂದು ಖುರಾನ್‌ನಲ್ಲಿನ ವಾಕ್ಯಗಳಿಂದ ತಿಳಿದುಕೊಂಡಿದ್ದೇವೆ. ಒಬ್ಬ ಮನುಷ್ಯನಿಗೆ, ಆ ಮನುಷ್ಯನ ಸಮಸ್ಯೆಗಳಾಗಲಿ, ಆತನ ಹೆಂಡತಿಯ ಬಾಧೆ (ಸಮಸ್ಯೆ) ಗಳಾಗಲಿ, ಆತನ ಮಕ್ಕಳ ಸಮಸ್ಯೆಗಾಳಗಲಿ, ಆಸ್ತಿಗೆ ಸಂಬಂಧಿಸಿದವುಗಳಾಗಲಿ ಎಲ್ಲಾ ಜೀವನದ ಎಲ್ಲ ಸಮಸ್ಯೆಗಳು, ದೇವರ ಮಾರ್ಗಕ್ಕೆ ಅಡಚಣೆಯಾಗುತ್ತವೆ. ಅವುಗಳನ್ನು ಅತಿಕ್ರಮಿಸುವುದೇ ಮನುಷ್ಯನಿಗೆ ಪರೀಕ್ಷೆ. ಅತಿಕ್ರಮಿಸಿದವನು ಜ್ಞಾನಪರೀಕ್ಷೆಯಲ್ಲಿ ಗೆದ್ದವನಾಗುತ್ತಾನೆ. ಹಾಗೆ ಗೆದ್ದವರು ಮೋಕ್ಷವನ್ನು ಹೊಂದುವರು. ಅದೇ ಅಲ್ಲಾಹ್ ಹತ್ತಿರ (ದೇವರ ಹತ್ತಿರ) ಹೊಂದುವ ದೊಡ್ಡ ಪ್ರತಿಫಲ. ಇದನ್ನೇ ಅನ್‌ಫಾಲ್ ಸುರಾದಲ್ಲಿ 28ನೇ

ಆಯತ್‌ನಲ್ಲಿ “ನಿಜಕ್ಕೂ ನಿಮ್ಮ ಆಸ್ತಿಪಾಸ್ತಿಗಳು, ನಿಮ್ಮ ಸಂತಾನವು ನಿಮ್ಮನ್ನು ಪರೀಕ್ಷಿಸುವ ಸಾಧನೆಗಳೆಂದು ನಿಶ್ಚಯವಾಗಿ ಹೇಳುತ್ತಿದ್ದೇವೆ. ಅಲ್ಲಾಹ್ ಹತ್ತಿರ ದೊಡ್ಡ ಪ್ರತಿಫಲ ಇದೆಯೆಂದು ತಿಳಿದುಕೊಳ್ಳಿ” ಎಂದಿದೆ.

ಒಬ್ಬ ಮನುಷ್ಯನ ಸುತ್ತ ಇರುವ ಸಮಸ್ಯೆಗಳೆಲ್ಲ ಪರೀಕ್ಷೆಗಳೆನ್ನಲಾಗುತ್ತದೆ. ಆ ಸಮಸ್ಯೆಗಳೆಲ್ಲ ಕರ್ಮಗಳ ಮೂಲವಾಗಿ ಬಂದಿರುವುವೇ ಆಗಿವೆ. ಮನೆಯಲ್ಲಿನ ಹೆಂಡತಿಗೆ ರೋಗ ಬಂದರೆ ಅದು ಹೆಂಡತಿಯ ಕರ್ಮವನ್ನು ಅನುಸರಿಸಿ ಬಂದಿರುವುದೇ ಹೊರತು ಗಂಡನನ್ನು ಪರೀಕ್ಷಿಸುವುದಕ್ಕೆ ಹೆಂಡತಿಯನ್ನು ದೇವರು ಬಾಧೆ ಇಡಲಿಲ್ಲವೆಂದು ತಿಳಿಯಬೇಕು. ಹಾಗೆ ಮನೆಯಲ್ಲಿನ ಮಗನಿಗೆ ಭಯಂಕರವಾದ ಗುಣವಾಗದ ರೋಗ ಬಂದಿದೆಯೆಂದರೆ, ಅದು ಆ ಬಾಲಕನ ಕರ್ಮಲಿಖಿತ ಪ್ರಕಾರ ಬಂದಿರಬಹುದು. ಆದರೆ ತಂದೆಯನ್ನು ಪರೀಕ್ಷಿಸುವುದಕ್ಕೆ ಆತನ ಮಗನಿಗೆ ರೋಗ ಬಂದಿದೆಯೆಂದುಕೊಳ್ಳಬಾರದು. ಹಾಗೆ ಎಲ್ಲ ಸಮಸ್ಯೆಗಳು ಅವರವರ ಕರ್ಮಗಳನ್ನು ಅನುಸರಿಸಿ ಬರುವವು. ಅವು ದೈವಮಾರ್ಗದಲ್ಲಿ ಶೋಧನೆಗಳಾಗಿ ಬದಲಾಗುತ್ತವೆಂಬ ಸತ್ಯವನ್ನು ಗ್ರಹಿಸಬೇಕು. ಹಾಗಲ್ಲದೆ ತಂದೆಯನ್ನು ಪರೀಕ್ಷಿಸುವುದಕ್ಕೆ ದೇವರು ಮಗನಿಗೆ ನೋವು ಕೊಟ್ಟರೂ, ಗಂಡನನ್ನು ಶೋಧಿಸುವುದಕ್ಕೆ ಹೆಂಡತಿಯನ್ನು ಅಪಘಾತಕ್ಕೆ ಗುರಿಮಾಡಿ ನೋವುಪಡುವ ಹಾಗೆ ಮಾಡಿದರೂ, ಅದು ದುರ್ಮಾರ್ಗದ ಕೆಲಸ ಆಗುತ್ತದೆ. ತೀವ್ರವಾದಿಗಳು ಅಮೆರಿಕಾ ಮೇಲಿನ ದ್ವೇಷದಿಂದ ಅಮೆರಿಕಾ ಪೌರನನ್ನು ಸಾಯಿಸಿದ ಹಾಗಾಗುತ್ತದೆ. ಪಕ್ಕದ ಮನೆಯವನು ವಿರೋಧಿಯಾದರೆ ಮುಗ್ಧನಾದ ಅವನ ಮಗನನ್ನು ಸಾಯಿಸಿದ ಹಾಗಾಗುತ್ತದೆ. ಒಟ್ಟಿನಲ್ಲಿ ಅನ್ಯಾಯ, ಅಮಾನುಷ ಕೆಲಸಗಳಾಗುತ್ತವೆ. ಹೀಗೆ ಅನ್ಯಾಯ, ಅಕ್ರಮವಾದ ಕೆಲಸವನ್ನು ದೇವರು ಮಾಡುವನೆನ್ನುವುದು ತಪ್ಪಾಗುತ್ತದೆ. ಅವನವನ ಕರ್ಮಗಳು ಅವನಿಗೆ ಪರೀಕ್ಷೆಗಳಾಗುತ್ತವಾಗಲಿ, ದೇವರು ಯಾರನ್ನು ಪ್ರತ್ಯೇಕವಾಗಿ ಪರೀಕ್ಷಿಸುವುದಿಲ್ಲ. ಒಬ್ಬನನ್ನು ಪರೀಕ್ಷಿಸುವುದಕ್ಕೆ ಅವನ ಮಗನನ್ನಾಗಲಿ, ಹೆಂಡತಿಯನ್ನಾಗಲಿ ಹಿಂಸೆಗಳಿಗೆ, ರೋಗಗಳಿಗೆ, ಅಪಘಾತಗಳಿಗೆ ಗುರಿ ಮಾಡುವುದಿಲ್ಲ, ದೇವರು

ಅಂತಹ ಕೆಲಸಗಳನ್ನು ಎಂದಿಗೂ ಮಾಡುವುದಿಲ್ಲ. ಅಂತಹ ಅಗತ್ಯ ಅವನಿಗಿಲ್ಲ. ಕರ್ಮಪ್ರಕಾರ ಬರುವ ಕಷ್ಟಗಳನ್ನು ಸಹಿಸಿಕೊಂಡು ಸಹನೆಯಿಂದ ದೈವಮಾರ್ಗ ದಲ್ಲಿ ಪ್ರಯಾಣಿಸುವವನಿಗೆ ಅತ್ಯಂತ ಉನ್ನತವಾದ, ಅತಿ ಉತ್ತಮವಾದ, ಶಾಶ್ವತವಾದ ಪರಲೋಕ (ಮುಕ್ತಿ) ಲಭಿಸುತ್ತದೆ.

ದೇವರ ಮಾರ್ಗದಲ್ಲಿರುವವರಿಗೆ, ದೈವದ ಮೇಲೆ ಬಿಟ್ಟರೆ ಇತರೆ ದೇವತೆಗಳ ಮೇಲೆ ಜ್ಞಾನವಿಲ್ಲದವರಿಗೆ ದೇವರು ಪ್ರಪಂಚದಲ್ಲಿನ ಸಮಸ್ಯೆ ಗಳನ್ನಾಗಲಿ, ಅನಾರೋಗ್ಯಗಳನ್ನಾಗಲಿ ತೊಲಗಿಸುವುದಿಲ್ಲ. ಆದರೆ ದೈವಮಾರ್ಗ ದಿಂದ ತಪ್ಪಿ ಹೋಗದ ಹಾಗೆ ಮಾಡುವನು. ಇದೇ ವಿಷಯವನ್ನು, "ದೈವವನ್ನು ನಂಬಿದವರಿಗೆ ಪರೀಕ್ಷೆಗಳು ಇಲ್ಲವೆಂದುಕೊಳ್ಳಬಾರದು" ಎಂದು ಅನ್ ಕಬೂತ್ ಸುರಾದಲ್ಲಿ ಹೇಳಿರುವಾಗ, ಭಗವದ್ಗೀತೆಯಲ್ಲಿ "ರಾಜವಿದ್ಯಾ ರಾಜಗುಹ್ಯ ಯೋಗ" ಎನ್ನುವ ಅಧ್ಯಾಯದಲ್ಲಿ 22ನೇ ಶ್ಲೋಕದಲ್ಲಿ ಹೀಗಿದೆ.

**ಶ್ಲೋ॥** ***"ಅನನ್ಯಾಶ್ಚಿನ್ತ ಯನ್ತೋಮಾಂ ಯೇಜನಾಃ ಪರ್ಯುಪಾಸತೆ***
***ತೇಷಾಂ ನಿತ್ಯಾಭಿ ಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್"***

**ಭಾವಾರ್ಥ : –** "ಅನ್ಯ ದೇವತೆ ಚಿಂತೆ ಇಲ್ಲದೆ ಎಲ್ಲ ವೇಳೆಯಲ್ಲೂ ನನ್ನನ್ನು ಉಪಾಸಿಸುತ್ತ ನಿತ್ಯವೂ ನನ್ನ ಜ್ಞಾನದಲ್ಲಿರುವವರ ಯೋಗದ ಕ್ಷೇಮವನ್ನು ನಾನೇ ನೋಡುತ್ತಿರುವೆನು" ಎಂದಿದ್ದಾನೆ. ಇದನ್ನು ಅನುಸರಿಸಿ ನೋಡಿದರೆ ಪರಮಾತ್ಮನನ್ನು (ದೇವರನ್ನು) ಮೀರಿದವನು ಯಾರೂ ಇಲ್ಲವೆಂದು, ಯಾವ ದೇವತಾಭಕ್ತಿ ಇಲ್ಲದೆ ಎಲ್ಲಾ ಕಾಲದಲ್ಲೂ ದೇವರನ್ನು ಆರಾಧಿಸುವವನಿಗೆ, ಅವನ ಸಮಸ್ಯೆಗಳಿಂದ ದೇವರು ಅವನನ್ನು ಕಾಪಾಡುವುದಿಲ್ಲವೆಂದು, ಅವನು ಸಮಸ್ಯೆಗಳಿಂದ ಸೋತುಹೋಗಿ ದೈವಮಾರ್ಗದಿಂದ ತಪ್ಪಿ ಹೋಗದಂತೆ ಅವನ ವಿಶ್ವಾಸಕ್ಕೆ (ಯೋಗಕ್ಕೆ) ಬಲವನ್ನು ಕೊಟ್ಟು ಕಾಪಾಡುತ್ತಿರುವನೆಂದು ತಿಳಿಯುತ್ತಿದೆ. ಖುರಾನ್‌ನಲ್ಲಿ ಹೇಳಿದರೂ, ಭಗವದ್ಗೀತೆಯಲ್ಲಿ ಹೇಳಿದರೂ ದೇವರದು ಒಂದೇ ಮಾತಾಗಿರುತ್ತದೆಂದು ಗ್ರಹಿಸಬಹುದು. ದೇವರ ಮೇಲೆ ವಿಶ್ವಾಸ, ಜ್ಞಾನ, ಯೋಗ,

ಇರುವಷ್ಟು ಮಾತ್ರಕ್ಕೆ ಸಮಸ್ಯೆಗಳು ಆತಂಕಗಳು (ಪರೀಕ್ಷೆಗಳು) ಇರುವುದಿಲ್ಲವೆಂದು ದೇವರು ಎಲ್ಲಿಯೂ ಹೇಳಲಿಲ್ಲ. ಆದರೆ ಅನ್‌ಫಾಲ್ ಸುರಾದಲ್ಲಿ ಅಲ್ಲಾಹ್ ಹತ್ತಿರ ದೊಡ್ಡ ಪ್ರತಿಫಲವಿದೆಯೆಂದು ಹೇಳಿದಂತೆ, ಗೀತೆಯಲ್ಲಿ ಸಹ ದೇವರು ಪ್ರತಿಫಲವಾಗಿ ಅವನ ಯೋಗದ ಕ್ಷೇಮವನ್ನು ವಹಿಸುವೆನೆಂದು ತಿಳಿಸಿದ್ದಾನೆ.

ದೇವರು ಭೂಮಿಯ ಮೇಲೆ ಮಾನವರನ್ನು ಸೃಷ್ಠಿಸಿ ಜೀವನವನ್ನು ಕೊಟ್ಟು ಅದರಲ್ಲಿ ಸ್ವರ್ಗ ನರಕಗಳನ್ನು ಸಹ ಕೊಟ್ಟಿದ್ದಾನೆ. ಮನುಷ್ಯ ಸ್ವರ್ಗ ನರಕಗಳ ಮಧ್ಯದಲ್ಲಿ ಜೀವನವನ್ನು ಕಳೆಯುವ ಹಾಗೆ, ಸ್ವರ್ಗ ನರಕಗಳು ಕರ್ಮಗಳಿಂದ (ಪಾಪ ಪುಣ್ಯಗಳಿಂದ) ಬರುವ ಹಾಗೆ ಏರ್ಪಾಟು ಮಾಡಿದ್ದಾನೆ. ಸೃಷ್ಠಿ ಆದಿಯಲ್ಲಿಯೇ ಮನುಷ್ಯನ ಜೀವನ ಹೇಗೆ ಸಾಗಬೇಕೋ ನಿರ್ಣಯಿಸಿ, ಮಹಾ ಪ್ರಳಯದವರೆಗೂ ಅದೇ ಪದ್ಧತಿಯನ್ನು ಸಾಗುವಂತೆ ಯಂತ್ರಾಂಗವನ್ನು ಏರ್ಪಡಿಸಿದ್ದಾನೆ. ಮನುಷ್ಯ ಮಹಾ ಪ್ರಳಯದವರೆಗೂ ಜೀವನವನ್ನು ಸಾಗಿಸುವ ಹಾಗೆ ಮಾಡಿದ ದೇವರು, ಮನುಷ್ಯ ಧರಿಸಿದ ಶರೀರ ಮರಣದಲ್ಲಿ ನಶಿಸುವಂತೆ ಮಾಡಿ, ಮತ್ತೆ ಹೊಸ ಶರೀರವೆನ್ನುವುದನ್ನು (ಸಮಾಧಿ ಎನ್ನುವುದನ್ನು) ಎಲ್ಲರಿಗೂ ಸಮಾನವಾಗಿ ಆದಿಯಿಂದ ಸಿಗುವಂತೆ ಮಾಡಿ, ಆ ಹೊಸ ಶರೀರದಿಂದ ಮರಣಾನಂತರ ಜೀವನವನ್ನು ಸಾಗಿಸುವುದಕ್ಕೆ ಆ ಶರೀರದಿಂದ (ಆ ಸಮಾಧಿಯಿಂದ) ದೇವರು ಜೀವಾತ್ಮನನ್ನು ಏಳಿಸುತ್ತಾನೆ. ಹಾಗೆ ಮೊದಲ ಸಮಾಧಿಯಿಂದ ಏಳಲ್ಪಟ್ಟಿರುವವನು ಜೀವನದಲ್ಲಿ ಸ್ವರ್ಗ ನರಕಗಳನ್ನು ಅನುಭವಿಸುತ್ತಾ ಹೋಗಿ ಸ್ವಲ್ಪ ಕಾಲಕ್ಕೆ ಶರೀರ ಬದಲಾವಣೆಗಾಗಿ ಸಾಯುವುದು ನಡೆಯುತ್ತಿದೆ. ಹಾಗೆ ಸತ್ತವನು ಮತ್ತೆ ಹೊಸ ಶರೀರದಲ್ಲಿ ಏಳಲ್ಪಡುವುದು ಸರ್ವಸಾಧಾರಣವಾಗಿ ನಡೆಯುತ್ತಿದೆ. ಶರೀರ ಮಾರ್ಪಾಟಿಗಾಗಿ ಸತ್ತುಹೋದ ವ್ಯಕ್ತಿ ಮತ್ತೆ ನಗ್ನವಾಗಿ ತಯಾರಾದ ಯಾವ ಗುಣ ಜ್ಞಾಪಕವಿಲ್ಲದ ಹೊಸ ಶರೀರದಲ್ಲಿ ಹುಟ್ಟುತ್ತಿದ್ದಾನೆ (ಈ ವಿಷಯ ಇನ್ನು ಪೂರ್ತಿಯಾಗಿ ಅರ್ಥವಾಗಬೇಕೆಂದರೆ ನಮ್ಮ ರಚನೆಗಳಲ್ಲಿನ **"ಜನನ ಮರಣ ಸಿದ್ಧಾಂತ"** ಎನ್ನುವ ಗ್ರಂಥವನ್ನು ಓದಿರಿ). ಹೊಸದಾಗಿ ತಯಾರಾದ ಶರೀರವನ್ನು ಸಮಾಧಿ ಎನ್ನುತ್ತಿದ್ದೇವೆ.

ಜೀವಾತ್ಮನು ತಾಯಿಗರ್ಭದಿಂದ ಹುಟ್ಟುವನೆಂದು ಎಲ್ಲರೂ ಅಂದುಕೊಳ್ಳುತ್ತಿರುವರು. ಆದರೆ ತಾಯಿಗರ್ಭದಿಂದ ಯಾವ ವ್ಯಕ್ತಿ ಇಲ್ಲಿಯವರೆಗೂ ಹುಟ್ಟಿಲ್ಲ. ತಾಯಿ ಗರ್ಭದಲ್ಲಿ ಪೂರ್ತಿ ತಯಾರಾದ ಶರೀರ ಪ್ರಸವಿಸಲ್ಪಟ್ಟ ನಂತರ ಅದರೊಳಗೆ ಜೀವಾತ್ಮ ಪ್ರವೇಶಿಸಿ ಹುಟ್ಟುವುದು ನಡೆಯುತ್ತದೆ. ತಾಯಿಗರ್ಭದಿಂದ ಶಿಶು ಶರೀರ ಹುಟ್ಟಿದೆಯಾಗಲಿ, ಜೀವಾತ್ಮ ಹುಟ್ಟಲಿಲ್ಲ. ಜೀವಾತ್ಮ, ಪ್ರಸವಿಸಲ್ಪಟ್ಟ ಹೊಸ ಶರೀರವನ್ನು ಸೇರಿದಾಗಲೇ ಆ ಶರೀರವನ್ನು ಸಮಾಧಿ ಎನ್ನಬಹುದು. ಶಿಶು ಶರೀರದೊಳಗೆ ಜೀವಾತ್ಮ ಪ್ರವೇಶಿಸದವರೆಗೂ ಆ ಶರೀರ ಸಮಾಧಿ ಎನ್ನಲಾಗುವುದಿಲ್ಲ. ಮೊದಲ ಶ್ವಾಸದೊಂದಿಗೆ ಜೀವಾತ್ಮ ಸೇರುವುದು ನಡೆಯುತ್ತದೆ. ಹಾಗೆ ಸೇರಿದ ಜೀವಾತ್ಮ ಮೊಟ್ಟ ಮೊದಲು ಆ ಶರೀರದಿಂದ ಏಳಲ್ಪಡುತ್ತಾನೆ. ಜೀವಾತ್ಮನು ಮರಣಿಸಿದ ಕ್ಷಣವೇ ಆ ಜೀವಾತ್ಮನ ಪಾಪ ಪುಣ್ಯಗಳನ್ನು ಅನುಸರಿಸಿ ಮರಣಾನಂತರ ಜೀವನವೂ, ಅದರಲ್ಲಿ ಅನುಭವಿಸಬೇಕಾದ ಸ್ವರ್ಗ ನರಕಗಳು ನಿರ್ಣಯಿಸಲ್ಪಡುತ್ತವೆ. ಕ್ಷಣ ಕಾಲದಲ್ಲಿಯೇ ಜೀವಾತ್ಮ ಪ್ರಸವಿಸಲ್ಪಟ್ಟ ಹೊಸ ಶರೀರವನ್ನು ಸೇರುತ್ತಾನೆ. ಅದರೊಳಗಿಂದ ತನ್ನ ಶರೀರದ ಮೇಲೆ ಜ್ಞಾಪಕವಿಲ್ಲದಂತೆ ಏಳಲ್ಪಡುತ್ತಾನೆ. ಸತ್ತಾಗ ಜೀವಾತ್ಮ ಹಳೆಯ ಶರೀರವನ್ನು ಬಿಟ್ಟು ಹೊಸ ಶರೀರವನ್ನು ಸೇರುವುದು, ಮರಣಾನಂತರ ಜೀವನಕ್ಕೆ ತಕ್ಕ ಕರ್ಮ (ಪ್ರಾರಬ್ಧಕರ್ಮ) ನಿರ್ಣಯಿಸಲ್ಪಡುವುದು, ಹೊಸ ಶರೀರದಿಂದ (ಸಮಾಧಿಯಿಂದ) ಏಳಲ್ಪಡುವುದು ಎಲ್ಲವೂ ಕ್ಷಣಕಾಲದಲ್ಲಿಯೇ ನಡೆದುಹೋ ಗುತ್ತದೆ. ಇದು ಇಲ್ಲಿಯವರೆಗೆ ಯಾರಿಗೂ ತಿಳಿಯದ ರಹಸ್ಯ. ಸರ್ವಾಧಿ ಕಾರಿಯಾದ ದೇವರಿಂದ ನಮಗೆ ತಿಳಿದುಬಂದಿದೆಯೆಂದು ಭಾವಿಸಬೇಕು. ಅಷ್ಟೇ ಅಲ್ಲದೇ ಈ ವಿಷಯವನ್ನು ಸತ್ಯಾನ್ವೇಷಣೆ ಬುದ್ಧಿಯಿಂದ ನೋಡಬೇಕು. ಇದು ಸತ್ಯವೇ ಆದ್ದರಿಂದ ಕೊನೆಗೆ ಯಾರಾದರೂ ಗ್ರಹಿಸಬಹುದು.

ಇದೆಲ್ಲಾ ಹೇಳುವುದಕ್ಕೆ ಕಾರಣ ಸಮಾಧಿಯ ನಿಜ ರೂಪ ಅರ್ಥವಾಗುವುದಕ್ಕೇ ಎಂದು ತಿಳಿಯಬೇಕು. ಸಮಾಧಿಯ ನಿಜ ರೂಪ ಅರ್ಥವಾದಾಗ ದೇವರು ಹೇಳಿದ ಜ್ಞಾನ ಪ್ರಕಾಶವಂತವಾಗಿ ಹೋಗಬಹುದು.

ಅದು ಎದುರಾಡದ ಜ್ಞಾನವಾಗಬಹುದು. ಅವನ ಮಾತಿನ ಮುಂದೆ ಯಾವ ಪ್ರಶ್ನೆ ಬರುವುದಿಲ್ಲ. ಪ್ರಶ್ನೆ ಇಲ್ಲದಿರುವುದೇ ದೇವರ ಜ್ಞಾನ. ದೇವರ ಜ್ಞಾನ ಸಂಪೂರ್ಣವಾಗಿ ತಿಳಿದು ಅದರ ಪ್ರಕಾರ ಆಚರಿಸುತ್ತಾ ಪ್ರಪಂಚ ಸಮಸ್ಯೆಗಳಿಗೆ ಭಯಪಡದವನು ದೇವರ ಸನ್ನಿಧಾನವಾದ ಪರಲೋಕ (ಮೋಕ್ಷ) ವನ್ನು ಸೇರುವನು. ಅಂತವನಿಗೆ ಜೀವನ ಅಗತ್ಯವಿಲ್ಲ, ಸಮಾಧಿ ಅಗತ್ಯವಿಲ್ಲ. ಅವನಿಗೆ ಮರಣಾನಂತರ ಜೀವನವಿರುವುದಿಲ್ಲ. ಯಾವ ಜೀವಾತ್ಮನಾದರೂ ಪರಲೋಕವನ್ನು ಸೇರದವರೆಗೂ ಜೀವನದ ಕೊನೆಯಲ್ಲಿ ಮರಣಹೊಂದಿದ ನಂತರ ಎರಡನೇ ಬಾರಿ ಶರೀರವನ್ನು ಧರಿಸುವುದು ನಡೆಯುತ್ತದೆ. ಅಂದರೆ ಮರಣಾನಂತರ ಜೀವನವನ್ನು ಹೊಂದುತ್ತಿರುವನು. ಅಂತವರು ಪೂರ್ತಿ ಮರಣವನ್ನು ಹೊಂದದೆ, ಹಾಗೆ ಪೂರ್ತಿ ಹುಟ್ಟುವುದನ್ನು ಹೊಂದದೆ ಎರಡರ ಮಧ್ಯದಲ್ಲಿ ಜೀವನದಲ್ಲಿಯೇ  ಇರುವನು. ಜೀವನದಲ್ಲಿ ಯಾವಾಗಲೂ ಸುಖದುಃಖಗಳಲ್ಲದೆ ಏನೂ ಇರುವುದಿಲ್ಲ. ಆದ್ದರಿಂದ ಜೀವನವನ್ನು ನರಕಾಗ್ನಿ ಎಂದು ಹೇಳುತ್ತಿದ್ದಾರೆ. ನರಕಾಗ್ನಿ ಎನ್ನುವುದನ್ನು (ಜೀವನ ಎನ್ನುವುದನ್ನು) ಹೊಂದಿದವನು ಪರಲೋಕವನ್ನು ಹೊಂದದೆ ಯಾವುದೋ ಒಂದು ಶರೀರದಿಂದ, ಯಾವುದೋ ಒಂದು ಜೀವನವನ್ನು ಕಳೆಯುತ್ತಿರಬೇಕು. ಅವನು ಸಾಯದೇ ಇರುವುದಿಲ್ಲ, ಹಾಗೆ ಹುಟ್ಟದೇ ಇರುವುದಿಲ್ಲ. ಅಂದರೆ ಅವನು ಸಾಯುತ್ತಾ ಇರಬೇಕಾದದ್ದೆ. ಹಾಗೆ ಮತ್ತೆ ಹುಟ್ಟುತ್ತಾ ಇರಬೇಕಾದದ್ದೆ. ಇದೇ ವಿಷಯವನ್ನು 87ನೇ ಸುರಾ ಆದ ಅಲ್‌ಅಲಾದಲ್ಲಿ 12ನೇ ಆಯತ್‌ನಲ್ಲಿ **"ಆತನು ಮಹಾಗ್ನಿಯೊಳಗೆ ಹೋಗುತ್ತಾನೆ. ಅದರಲ್ಲಿ ಆತನು ಸಾಯಲೂ ಇಲ್ಲ, ಬದುಕಲೂ ಇಲ್ಲ"** ಎಂದು ಹೇಳಿದ್ದಾರೆ. ಅಂತವನಿಗೆ ಶರೀರಗಳು ಬದಲಾಗುತ್ತಿದ್ದರೂ ಅವನು ನಿತ್ಯವೂ ನರಕದಲ್ಲಿ ಇದ್ದಂತಾಗುತ್ತದೆ. ಪರಲೋಕದಲ್ಲಲ್ಲದೇ ಇಹಲೋಕದಲ್ಲಿ ಇರುವವನಿಗೆ ಪ್ರತಿ ಹೊಸ ಶರೀರ ಸಮಾಧಿಯಾಗುತ್ತದೆ. ಅವನು ಶರೀರ ಪ್ರಳಯವನ್ನು ಹೊಂದಿದಾಗಲೆಲ್ಲಾ ಶರೀರ ಸಮಾಧಿಯಿಂದ ಏಳಲ್ಪಡುತ್ತಾನೆ.

ಇದೆಲ್ಲವೂ ಈಗಿನ ಕಾಲದಲ್ಲಿ ಓದುವವರಿಗೆ, ಕೇಳುವವರಿಗೆ ಹೊಸದಾಗಿ ಕಾಣಿಸಿದರೂ ಇದು ಎಂದಿಗೂ ಸತ್ಯ. ಇದು ಸತ್ಯವಾದರೂ ಶರೀರವೆನ್ನುವ ಸಮಾಧಿಯಿಂದ ಮನುಷ್ಯ ಮರಣದ ನಂತರ ಎದ್ದಾಗ, ಶರೀರದೊಳಗಿರುವ ಜೀವಾತ್ಮನಿಗೆ ಯಾವ ಜ್ಞಾಪಕವಿಲ್ಲದಿರುವುದರಿಂದ, ಈಗ ನಾವು ಹೇಳುತ್ತಿರುವ ವಿಷಯ ಸತ್ಯವೋ ಅಸತ್ಯವೋ ಎಂದು ಯೋಚಿಸಬೇಕಾಗಿ ಬರುತ್ತದೆ. ಈ ವಿಷಯದಲ್ಲಿ ಮಾಯೆ (ಸಾತಾನ್ ಇಲ್ಲವೆ ಸೈತಾನ್) ಮೊದಲೇ ತಪ್ಪುದಾರಿ ಇಡಿಸಿರುವುದರಿಂದ ನಮ್ಮ ಮಾತನ್ನು ನಂಬುವುದಕ್ಕೆ ಎಲ್ಲರೂ ಹಿಂದೆ ಸರಿಯಬಹುದು. ನಮ್ಮ ಮಾತುಗಳಿಗೆ ಬಲವನ್ನು ಕೈಗೂಡಿಸಲು, ಎಲ್ಲರೂ ಯೋಚಿಸುವುದಕ್ಕೆ ಅವಕಾಶವಾಗಿ ದೇವರು ಸಮಾಧಿಯಿಂದ ಮನುಷ್ಯನನ್ನು ಪ್ರತಿ ದಿನ ಹೊರಗೆ ಬರುವಂತೆ ಮಾಡಿದ್ದಾನೆ. ಇದರಿಂದ ಪ್ರಜೆಗಳು ಸತ್ಯವನ್ನು ಗ್ರಹಿಸುವುದಕ್ಕೆ, ದೇವರ ಮಾತು ಶಾಸನವೆಂದು ಅರ್ಥವಾಗುವುದಕ್ಕೆ ಅವಕಾಶ ವಿರುತ್ತದೆ. ಅದು ಹೇಗೆಂದರೆ! ಮನುಷ್ಯ ಮರಣವನ್ನು ಹೊಂದುವುದು ಎಲ್ಲರೂ ನೋಡುತ್ತಿರುವ ಪ್ರತ್ಯಕ್ಷ ಸತ್ಯ. ಹಾಗೆ ಹುಟ್ಟುವುದು ಸಹ ಪ್ರತ್ಯಕ್ಷವಾಗಿ ನಡೆಯುವುದೆ ಆಗಿದೆ. ಮರಣ, ಜನನ ಎರಡೂ ಪ್ರತ್ಯಕ್ಷ ಪ್ರಮಾಣಗಳೇ ಆದರೂ, ಮರಣದಲ್ಲಿ ಏನು ನಡೆಯುತ್ತಿದೆಯೊ ಹಾಗೆ ಜನನದಲ್ಲಿ ಏನು ನಡೆಯುತ್ತಿದೆಯೋ ಯಾರಿಗೂ ಅವುಗಳ ಅನುಭವ ಮಾತ್ರ ಗೊತ್ತಿಲ್ಲ. ಈ ವಿಷಯ ಸಾಮಾನ್ಯ ಪ್ರಜೆಗಳಿಗಲ್ಲದೆ ಭೌತಿಕ ವಿಷಯಗಳು, ಶರೀರ ಭಾಗಗಳು, ರೋಗಗಳನ್ನು ತಿಳಿದ ಡಾಕ್ಟರುಗಳಿಗೆ ಸಹಿತ ತಿಳಿದಿಲ್ಲವೆಂದೇ ಹೇಳಬಹುದು. ಎಲ್ಲರಿಗೂ ಹೇಗೆ ತಿಳಿದಿಲ್ಲವೋ ಆಗ ನಡೆಯುತ್ತಿರುವುದೇನೆಂದು ಈಗ ವಿವರವಾಗಿ ಹೇಳಬೇಕೆಂದರೆ ಅವಕಾಶವಿಲ್ಲ. ಈ ವಿಷಯಗಳೆಲ್ಲ **"ಜನನ ಮರಣ ಸಿದ್ಧಾಂತ"** ಎನ್ನುವ ಗ್ರಂಥದಲ್ಲಿ ಬರೆದಿಟ್ಟಿದ್ದೇವೆ. ಇತ್ತ ಸಾವಿನಲ್ಲಾಗಲಿ, ಅತ್ತ ಹುಟ್ಟಿನಲ್ಲಾಗಲಿ ಮನುಷ್ಯನಿಗೆ ಯಾವ ಜ್ಞಾನವಿಲ್ಲದಿರುವುದರಿಂದ, ನಂತರ ಹೇಳುವುದಕ್ಕೆ ಆ ಸಮಯದಲ್ಲಿನ ಜ್ಞಾನವಿಲ್ಲದಿರುವುದರಿಂದ, ಎಲ್ಲರಿಗೂ ಆ ಎರಡು ವಿಷಯಗಳೂ ಅಗಮ್ಯಗೋಚರಗಳೇ ಆಗಿವೆ. ಆದರೆ ದೇವರು ಈ ಎರಡು ವಿಷಯಗಳನ್ನು ಮನುಷ್ಯ ಆಲೋಚಿಸಿ ತಿಳಿದುಕೊಳ್ಳುವುದಕ್ಕೆ ಎಲ್ಲ ಜ್ಞಾನಗಳಿರುವ ಸಮಯದಲ್ಲಿ

ಅವುಗಳ ನಮೂನೆಯನ್ನು ಮನುಷ್ಯನಿಗೆ ಅಳವಡಿಸಿದ್ದಾನೆ. **ಮರಣಕ್ಕೂ ಜನನಕ್ಕೂ ಮಾದರಿಯಾಗಿರುವವೇ, ಪ್ರತಿನಿತ್ಯವೂ ಘಟನೆಗಳಾಗಿ ಸಂಭವಿಸುತ್ತಿರುವ ನಿದ್ರೆ ಎಚ್ಚರಗಳು.**

ತಿಳಿವಳಿಕೆ ಇರುವವನಿಗೆ, ತಿಳಿವಳಿಕೆ ಇಲ್ಲದಿರುವವನಿಗೆ, ಮೇಧಾವಿಗಳಿಗೂ, ಮೂರ್ಖರಿಗೂ ಎಲ್ಲರಿಗೂ ಪ್ರತಿದಿನ ನಿದ್ರೆ ಬರುತ್ತಿದ್ದರೂ ಅದು ಮನುಷ್ಯನ ಆಧೀನದಲ್ಲಿ ಇಲ್ಲ. ಯಾವಾಗ ಬರುತ್ತದೋ, ಹೇಗೆ ಬರುತ್ತದೋ, ಬರುವ ಸಮಯದಲ್ಲಿ ಅನುಭವವೇನೆಂದು ಯಾರಿಗೂ ತಿಳಿಯದು. ಸಾವೂ ಸಹ ಇಂತಹುದೆ! ಯಾವಾಗ ಬರುತ್ತದೋ, ಹೇಗೆ ಬರುತ್ತದೋ, ಬಂದಿರುವ ಸಮಯದಲ್ಲಿ ಅನುಭವವೇನೆಂದು ಯಾರೂ ಹೇಳಲಾರರು. ಇನ್ನೂ ಹೇಳಬೇಕೆಂದರೆ ಮನುಷ್ಯನ ಹುಟ್ಟಿನಲ್ಲಿ ಏನು ನಡೆಯುತ್ತಿದೆಯೋ, ಜೀವಾತ್ಮನು ಶರೀರದೊಳಗೆ ಯಾವಾಗ ಪ್ರವೇಶಿಸುತ್ತಾನೋ, ಹೇಗೆ ಪ್ರವೇಶಿಸುತ್ತಾನೋ, ಹೇಗೆ ಏಳಲ್ಪಡುತ್ತಾನೋ, ಯಾರಿಂದ ಏಳಲ್ಪಡುತ್ತಾನೋ ಯಾರಿಗೂ ತಿಳಿಯದು. ಹಾಗೆ ಪ್ರತಿ ದಿನ ನಿದ್ರೆಯಿಂದ ಏಳುವುದು ಸಹ ಮನುಷ್ಯನಿಗೆ ಪೂರ್ತಿ ತಿಳಿದಿಲ್ಲ. ನಿದ್ರೆಯಲ್ಲಿ ಶರೀರದಲ್ಲಿ ಅಡಗಿರುವ ಜೀವಾತ್ಮನು ಪ್ರಪಂಚ ಜ್ಞಾನದೊಳಗೆ ಹೇಗೆ ಬರುತ್ತಾನೆ? ಯಾರು ಏಳಿಸುತ್ತಿದ್ದಾರೆ ಎನ್ನುವ ವಿಷಯ ಸಹ ಪೂರ್ತಿಯಾಗಿ ಯಾರಿಗೂ ತಿಳಿದಿಲ್ಲ. ವಾಸ್ತವವಾಗಿ ಸಾವು ಹುಟ್ಟುಗಳ ಮಾದಿರಿಗಳಾಗಿ ನಿದ್ರೆ ಎಚ್ಚರಗಳನ್ನು ದೇವರು ಇಟ್ಟಿದ್ದಾನೆ. ಸಾವು ಹುಟ್ಟು ಯಾರಿಗೂ ಅರ್ಥವಾಗದ ಅತ್ಯಂತ ರಹಸ್ಯಗಳು. ಅಂತಹವು ಮಾನವನಿಗೆ ತಿಳಿಯಬೇಕೆಂದರೆ ಅವುಗಳ ಮಾದರಿಯನ್ನು ನೋಡಿ ತಿಳಿಯಬೇಕಾಗುತ್ತದೆ. ಆದ್ದರಿಂದ **ಸಾವು ಹುಟ್ಟುಗಳ ರಹಸ್ಯಗಳು ತಿಳಿಯುವುದಕ್ಕೆ ದೇವರು ನಿದ್ರೆ ಎಚ್ಚರಗಳನ್ನು ಪ್ರತ್ಯಕ್ಷ ಪ್ರಮಾಣಗಳಾಗಿ ಇಟ್ಟಿದ್ದಾನೆ. ಈ ವಿಧಾನದಲ್ಲಿ ಒಂದು ಮರಣವು ಒಂದು ನಿದ್ರೆಯಂತಹುದು, ಒಂದು ಹುಟ್ಟುವುದು ಒಂದು ಎಚ್ಚರವಿರುವಂತದ್ದು.**

ಮೊದಲು ನಿದ್ರೆಯನ್ನು ಕುರಿತು ವಿವರಿಸಿ ನೋಡೋಣ. ನಿದ್ರೆ ಎನ್ನುವುದು ಎಲ್ಲರಿಗೂ ಸುಪರಿಚಯವಾದದ್ದೆ ಆಗಿದೆ. ಆದರೂ ಯಾರಾದರೂ ಅದು ಯಾವಾಗ ಬರುತ್ತದೆಂದು ಆ ಸಮಯವನ್ನು ಹೇಳಲಾರರು. ನಿತ್ಯವು ಮನುಷ್ಯನಿಗೆ ನಿದ್ರೆ ಬರುತ್ತಿದ್ದರೂ ಅದು ಖಂಡಿತವಾಗಿ ಬಂದಿರುವ ಸಮಯವನ್ನು ಯಾವ ಮೇಧಾವಿಯೂ ಹೇಳಲಾರನು. ಯಾರು ಸಂಶೋಧಿಸಿದರೂ, ಎಷ್ಟು ದೊಡ್ಡ ಸಂಶೋಧಕರಾದರೂ, ನಿದ್ರೆ ಬರುತ್ತದೆಂದು ತಿಳಿದುಕೊಂಡು, ಅದು ಯಾವ ಸಮಯದಲ್ಲಿ ಬಂದಿದೆಯೆಂದು ಮಾತ್ರ ಹೇಳಲಾರರು. ನಿದ್ರೆ ಬರುವ ಸಮಯದಲ್ಲಿ ಶರೀರದಲ್ಲಿ ಮೊದಲು ಏನು ನಡೆಯುತ್ತದೆಯೋ, ನಂತರ ಏನು ನಡೆದಿದೆಯೋ ಯಾರಿಗೂ ತಿಳಿಯುವುದಿಲ್ಲ. ಶರೀರದಲ್ಲಿ ನಿದ್ರೆ ಸಮಯದಲ್ಲಿ ಯಾವ ಬದಲಾವಣೆಗಳು ನಡೆಯುತ್ತಾ ಹೋಗಿ ಕೊನೆಗೆ ಮನುಷ್ಯ ಹೇಗೆ ನಿದ್ರೆಯನ್ನು ಹೊಂದುತ್ತಿದ್ದಾನೆಂದು ತಿಳಿದುಕೊಂಡರೆ, ಮನುಷ್ಯ ಸಾಯುವ ಸಮಯದಲ್ಲಿ ಶರೀರದಲ್ಲಿ ಏನು ನಡೆಯುತ್ತಿದೆಯೆಂದು, ಏನು ನಡೆದ ನಂತರ ಮನುಷ್ಯ ಮರಣವನ್ನು ಹೊಂದುತ್ತಿದ್ದಾನೆಂದು ತಿಳಿಯಬಹುದು. ಹಾಗೆ ನಿದ್ರೆಯಿಂದ ಏಳುವ ಮನುಷ್ಯನಲ್ಲಿ ಏನು ನಡೆಯುತ್ತಿದೆಯೆಂದು, ಅವನು ಹೇಗೆ ಏಳುತ್ತಿದ್ದಾನೆಂದು ತಿಳಿದುಕೊಂಡರೆ ಅದರ ಮಾದರಿಯಲ್ಲಿಯೇ ಜನನ ಆಗುತ್ತದೆಂದು ತಿಳಿದುಕೊಳ್ಳಬಹುದು. ಕೆಲವರು ನಿದ್ರೆ ಎಚ್ಚರಗಳ ವಿಷಯವನ್ನು ತಿಳಿದುಕೊಳ್ಳುವುದು ಸುಲಭ ತಾನೆ ಎಂದು ಅಂದುಕೊಳ್ಳಬಹುದು. ಅವುಗಳನ್ನು ಸುಲಭವಾಗಿ ತಿಳಿದುಕೊಳ್ಳುವುದಕ್ಕೆ ಯಾರಿಗೂ ಸಾಧ್ಯವಾಗುವುದಿಲ್ಲವೆಂದೇ ಹೇಳಬಹುದು. ಆದ್ದರಿಂದ ವೇಮನ ಯೋಗಿ ಸಹ "ನಿದ್ರೆಯಲ್ಲಿನ ಮರ್ಮವನ್ನು ತಿಳಿದವನು ನಿಜಯೋಗಿ" ಎಂದಿದ್ದಾನೆ. ಕೆಲವರಾದರೆ ನಾನೇ ನಿದ್ರೆ ಹೋಗುತ್ತಿದ್ದೇನೆ, ನಾನೇ ಎಚ್ಚರಗೊಳ್ಳುತ್ತಿದ್ದೇನೆಂದು ಹೇಳುತ್ತಿದ್ದಾರೆ. ಹಾಗೆ ಯಾರಾದರೂ ಭ್ರಮೆಪಡಬಹುದು. ಆದರೆ ನಿದ್ರೆ ಎಚ್ಚರಗಳಲ್ಲಿ ಯಾರಿಗೂ ಸ್ವತಂತ್ರತೆ ಇಲ್ಲ. ಇಲ್ಲಿಯವರೆಗೂ ಸಾವು ಹುಟ್ಟುಗಳಿಗೆ ಮಾದರಿಯಾದ ನಿದ್ರೆ ಎಚ್ಚರಗಳ ವಿಷಯವೇ ಅತ್ಯಂತ ರಹಸ್ಯವಾಗಿದ್ದು, ಅದಕ್ಕಿಂತ ದೊಡ್ಡ ರಹಸ್ಯವಾದ ಸಾವು ಹುಟ್ಟುಗಳ ವಿಷಯವೂ ಯಾರಿಗೂ ತಿಳಿಯದೆಂದೇ ಹೇಳಬಹುದು.

ಯಾರಿಗೂ ತಿಳಿಯದೆಂದು ಹೇಳುತ್ತಿರುವ ನಿನಗೆ ಹೇಗೆ ತಿಳಿದಿದೆಯೆಂದು ನನ್ನನ್ನು ನೀವು ಪ್ರಶ್ನಿಸಬಹುದು. ನನಗೆ ತಿಳಿದಿದೆಯೆಂದು ನಾನಿಲ್ಲಿಯವರೆಗೂ ಎಲ್ಲಿಯೂ ಹೇಳಲಿಲ್ಲ. ಅತ್ಯಂತ ದೊಡ್ಡ ರಹಸ್ಯವಾದ ಜನನ ಮರಣಗಳು ನನಗೆ ತಿಳಿದಿಲ್ಲ. ಆದರೆ ನನಗೆ ಜೊತೆಯಾಗಿರುವವನಿಗೆ ಎಲ್ಲ ತಿಳಿದಿದೆಯೆಂದು ಸಾಕಷ್ಟು ಸಾರಿ ಹೇಳಿದ್ದೇನೆ. ಪ್ರತಿ ದಿನ ಮನುಷ್ಯನನ್ನು ನಿದ್ರೆಯೊಳಗೆ ಕಳುಹಿಸುವವನು ಮತ್ತು ಎಚ್ಚರದೊಳಗೆ ಏಳಿಸುವವನು ನನ್ನ ಶರೀರದಲ್ಲಿದ್ದಾನೆ. ಅವನಿಗೆ ತಿಳಿಯದ ರಹಸ್ಯವೇನೂ ಇಲ್ಲ. ಅವನೊಂದಿಗೆ ನಾನು ಸ್ನೇಹ ಮಾಡಿರುವುದರಿಂದ ಅವನು ತಿಳಿಸುವುದು ನಾನು ನಿಮಗೆ ತಿಳಿಸುತ್ತಿದ್ದೇನೆ. ಆದ್ದರಿಂದ ಯಾವ ಬೋಧನೆಯನ್ನು ಹೇಳುವಾಗಾಗಲಿ, ಯಾವ ಜ್ಞಾನವನ್ನು ಬರೆಯುವಾಗಾಗಲಿ "ನಾವು ಹೇಳುವುದು ಏನೆಂದರೆ ಎಂದು, ಮತ್ತು ನಾವು ಬರೆಯುವುದು ಏನೆಂದರೆ" ಎಂದು ಬರೆಯುತ್ತಿರುತ್ತೇವೆ. ನನಗೇ ಅಲ್ಲ ನಿಮಗೂ ಜೊತೆಗಿರುವವನು, ನಿಮ್ಮ ಶರೀರಗಳಿಗೆ ಅಧಿಪತಿಯಾಗಿ ಇರುವವನು ಎಲ್ಲರ ಶರೀರಗಳಲ್ಲಿಯೂ ಇದ್ದಾನೆ. ಆದರೆ ಅವನು ಒಬ್ಬ ನಿದ್ದಾನೆಂದಾಗಲಿ, ಅವನೇ ಶರೀರಕ್ಕೆ ಅಧಿಪತಿ ಎಂದಾಗಲಿ, ಅವನು ಮಾಡಿಸಿದರೆ ಎಲ್ಲ ನಡೆಯುತ್ತಿವೆ ಯೆಂದಾಗಲಿ ತಿಳಿಯದೆ ಶರೀರದಲ್ಲಿಯೇ ಇದ್ದೇನೆಂದು ಅಂದುಕೊಳ್ಳುವುದರಿಂದ ನಿನ್ನಲ್ಲಿರುವವನು ನಿನಗೆ ಏನೂ ಹೇಳುವುದಿಲ್ಲ. ನಿನಗೆ ಏನೂ ತಿಳಿಯುತ್ತಿಲ್ಲ. ನಿಮಗೂ ನನಗೂ ಅಷ್ಟೇ ವ್ಯತ್ಯಾಸ ಬಿಟ್ಟರೆ ಏನೂ ಇಲ್ಲ. ಆ ವ್ಯತ್ಯಾಸದಿಂದ ಕೆಲವು ರಹಸ್ಯಗಳನ್ನು ನಾನು ಹೇಳುತ್ತಿದ್ದೇನೆ, ನೀವು ಹೇಳಲಾಗದೆ ಇದ್ದೀರಿ.

ನಿದ್ರೆಯಿಂದ ಹೇಗೆ ಏಳುತ್ತಿದ್ದೇವೆಂದು ತಿಳಿದುಕೊಂಡರೆ, ಸಮಾಧಿ ಯಿಂದ ಹೇಗೆ ಏಳುತ್ತಿದ್ದೇವೆಂದು ತಿಳಿಯಬಹುದು. ನಿದ್ರೆ ಹೋದವನು ಶರೀರದಿಂದ ಸ್ವಂತಃ ಏಳುವುದಿಲ್ಲ. ಹಾಗೆ ಸತ್ತುಹೋದವನು ಸ್ವತಃ (ಸಮಾಧಿ ಯಿಂದ) ಏಳುವುದಿಲ್ಲ. ನಿದ್ರೆ ಹೋದವನು ಮಲಗಿರುವ ಶರೀರದಿಂದ ಏಳಲ್ಪಡುತ್ತಿದ್ದಾನೆ. ಹಾಗೆಯೇ ಸತ್ತುಹೋದವನು ತಾಯಿ ಗರ್ಭದಿಂದ ಹೊರಗೆ ಬಿದ್ದುಹೋದ ಶರೀರದಿಂದ ಏಳಲ್ಪಡುತ್ತಿದ್ದಾನೆ. ನಿದ್ರೆ ಹೋದವನೂ,

ಸತ್ತುಹೋದವನೂ ಯಾರಿಗೂ ತಿಳಿಯದೆ ಶರೀರದಲ್ಲಿಯೇ ಇರುವವನಿಂದ ಏಳಲ್ಪಡುತ್ತಾನೆ. ನಿದ್ರೆ ಹೋದವನಿಗೆ ತಾನು ವಾಸಿಸುವ ಹಳೇ ಶರೀರವೇ ಸಮಾಧಿ ಆದರೆ, ಸತ್ತು ಹೋದವನಿಗೆ ತಾನು ವಾಸಿಸಲು ಹೋದ ಹೊಸ ಶರೀರವೇ ಸಮಾಧಿ ಆಗುತ್ತಿದೆ. ಶರೀರದಲ್ಲಿ ನಿದ್ರೆ ಹೋದವನನ್ನು ಆ ಶರೀರದಲ್ಲಿ ಜೀವಾತ್ಮನಿಗೆ ಜೊತೆಯಾಗಿರುವ ಆತ್ಮವೇ ಶರೀರದಿಂದ ಏಳಿಸುತ್ತಿದೆ. ಸತ್ತು ಹೋದವನನ್ನು ಅವನು (ಆತ್ಮ, ಜೀವಾತ್ಮ) ಸೇರಿದ ಹೊಸ ಶರೀರದಿಂದ ಆತ್ಮವೇ ಜೀವಾತ್ಮನನ್ನು ಎಬ್ಬಿಸುತ್ತದೆ. ಇಲ್ಲಿ ಕೆಲವರು ಒಂದು ಪ್ರಶ್ನೆಯನ್ನು ಕೇಳಬಹುದು. ಅದೇನೆಂದರೆ! ಹೊಸದಾಗಿ ಹುಟ್ಟಿದ ವಿಷಯ ನಮಗೆ ತಿಳಿದಿಲ್ಲ. ಆದರೆ ನಿದ್ರೆ ಹೋದವನನ್ನು ನಾವು ಯಾವಾಗ ಏಳಿಸಿದರೆ ಆಗ ಅವನು ನಿದ್ರೆಯಿಂದ ಏಳುತ್ತಿದ್ದಾನೆ. ಆಗಿರುವಾಗ ನಿದ್ರೆ ಹೋದ ಮನುಷ್ಯನನ್ನು ಎಚ್ಚರದಲ್ಲಿರುವ ಮತ್ತೊಬ್ಬ ಎಬ್ಬಿಸುತ್ತಿರುವಾಗ, ಇದು ಎಲ್ಲರಿಗೂ ತಿಳಿದ ವಿಷಯವಾಗಿರುವಾಗ ನೀವು ನಿದ್ರೆ ಹೋದವನನ್ನು, ಅವನ ಶರೀರದಲ್ಲಿನ ಆತ್ಮವೇ ಎಬ್ಬಿಸುತ್ತದೆಂದು ಹೇಳುತ್ತಿದ್ದೀರಾ. ನಿಮ್ಮ ಮಾತು ಸುಳ್ಳಲ್ಲವೆ! ಎಂದು ಕೇಳಬಹುದು. ನನ್ನ ಮಾತು ಸುಳ್ಳಾದರೆ ನೀವು ಈ ಪ್ರಶ್ನೆಯನ್ನು ಕೇಳಿದರೂ ಅದಕ್ಕೆ ಉತ್ತರ ಹೇಳದೆ ಅದನ್ನು ದಾಟಿ ಹೋಗುತ್ತಿದ್ದೆ. ನನ್ನ ಮಾತು ಸುಳ್ಳಲ್ಲ. ಆದ್ದರಿಂದ ನೀವು ಕೇಳದಿದ್ದರೂ ಆ ಪ್ರಶ್ನೆಯನ್ನು ನಾನೇ ಉದ್ಭವಿಸುವಂತೆ ಮಾಡಿ ಯಾರಾದರೂ ಹೀಗೆ ಕೇಳಬಹುದೆಂದು ಪ್ರಶ್ನಿಸಿದ್ದೇನೆ. ಅದಕ್ಕೆ ಉತ್ತರವನ್ನು ಸಹ ಹೇಳುತ್ತಿದ್ದೇನೆ. ಇಲ್ಲಿ ಪ್ರಶ್ನೆ ಉತ್ತರ ಎರಡೂ ನನ್ನವೇ ಆದರೂ, ಪ್ರಶ್ನೆ ನಿಮ್ಮದು, ಉತ್ತರ ನನ್ನದು.

ನಿದ್ರೆ ಹೋದವನನ್ನು ಮತ್ತೊಬ್ಬನು ಎಬ್ಬಿಸಿದಾಗ ನಿದ್ರೆ ಹೋದವನು ಎದ್ದರೂ, ಮೇಲಕ್ಕೆ ಇವನು ಎಬ್ಬಿಸಿದರೆ ಅವನು ಎದ್ದಂತೆ ಕಾಣಿಸಿದರೂ, ಶರೀರದೊಳಗೆ ಎಬ್ಬಿಸಿದವನು ಮಾತ್ರ ಆ ಶರೀದೊಳಗಿನ ಆತ್ಮವೇ. ಆತ್ಮ ತನ್ನ ಇರುವಿಕೆಯನ್ನು ಹೊರಗೆ ಮನುಷ್ಯ ಗ್ರಹಿಸದಂತೆ, ಹೊರಗಿನವನು ಕರೆದಾಗ ಒಳಗಿನ ಆತ್ಮ ಆ ಶರೀರದೊಳಗಿನ ಜೀವಾತ್ಮನನ್ನು ಎಚ್ಚರಗೊಳಿಸುತ್ತದೆ.

ನಿದ್ರೆಯೊಳಗಿರುವ ಜೀವಾತ್ಮನಿಗೆ ಹೊರಗಿನ ಶಬ್ದವಾಗಲಿ, ಹೊರಗಿನ ಸ್ಪರ್ಶವಾಗಲಿ ತಿಳಿಯುವುದಿಲ್ಲ. ಕಿವುಡುತನ ಇರುವವನನ್ನು ಕರೆದರೆ ಆ ಮಾತು ಅವನಿಗೆ ಕೇಳಿಸದು, ಹಾಗೆ ತಟ್ಟಿದರೂ, ಆ ಸ್ಪರ್ಶ ಅವನಿಗೆ (ಜೀವಾತ್ಮನಿಗೆ) ತಿಳಿಯುವುದಿಲ್ಲ. ಆಗಿರುವಾಗ ನಿದ್ರೆ ಹೋಗುವವನನ್ನು ಹೊರಗಿನವನು ಕರೆದರೂ, ತಟ್ಟಿದರೂ ಅವನು ಏಳುವುದಕ್ಕೆ ಅವಕಾಶವಿಲ್ಲ. ಆದರೆ ನಿದ್ರೆ ಹೋದವನನ್ನು ಹೊರಗಿನವನು ಕರೆದಾಗ, ಆತ್ಮಜ್ಞಾನ ತಿಳಿಯದವನಿಗೆ ಆತ್ಮ ತಿಳಿದುಬರುವುದು ಧರ್ಮ ವಿರುದ್ಧವಾಗುವುದು, ಆದ್ದರಿಂದ ಆತ್ಮ ಒಂದಿದೆಯೆಂದು ತಿಳಿಯದಂತೆ, ಆತ್ಮವೇ ನಿದ್ರೆ ಹೋದವನನ್ನು ಏಳಿಸಿ, ಹೊರಗಿನವನು ನಾವು ಏಳಿಸಿದರೆ ಎದ್ದಿದ್ದಾನೆನ್ನುವ ಭ್ರಮೆಯಲ್ಲಿ ಬೀಳುವಂತೆ ಮಾಡುತ್ತಿದೆ. ಒಂದೊಂದು ಬಾರಿ ಯಾರು ಕರೆದರೂ ನಿದ್ರೆಯಿಂದ ಏಳದವರನ್ನು ಸಹ ನೋಡಬಹುದು. ಹಾಗೆ ತಟ್ಟಿದರೂ ಏಳದವನನ್ನು ಸಹ ನೋಡಬಹುದು. ಶರೀರಕ್ಕೆ ಅಧಿಪತಿ, ಆ ಶರೀರದೊಳಗಿನ ಆತ್ಮವೇ ಆಗಿರುವುದರಿಂದ ಆತ್ಮ ಪ್ರಮೇಯವಿಲ್ಲದೆ ಏನೂ ನಡೆಯುವುದಿಲ್ಲ. ಆತ್ಮ ಶರೀರದಲ್ಲಿ ಇದ್ದೂ ಮನುಷ್ಯನಿಗೆ ಇಷ್ಟ ಬಂದ ಹಾಗೆ ಶರೀರವನ್ನು ಕೆಲವು ಕಾರ್ಯಗಳಲ್ಲಿ ನಡೆಸುತ್ತಾ, ಶರೀರಕ್ಕೆ ನಾನೇ ಅಧಿಪತಿಯೆಂದು ಅಂದುಕೊಳ್ಳುವಹಾಗೆ ಆ ಶರೀರದೊಳಗಿರುವ ಜೀವಾತ್ಮ ಭ್ರಮೆಪಡುವಂತೆ ಮಾಡುತ್ತದೆ. ಅಂತಹ ಕೆಲಸಗಳು ಕೆಲವನ್ನು ಜೀವಾತ್ಮನ ಇಷ್ಟವನ್ನನುಸರಿಸಿ ಆತ್ಮ ಮಾಡುತ್ತಿರುವುದರಿಂದ, ಮನುಷ್ಯ ನನ್ನ ಶರೀರ ನನ್ನ ಇಷ್ಟ ಎನ್ನುತ್ತಿದ್ದಾನೆ. ತನಗೆ ಶರೀರದ ಮೇಲೆ ಯಾವ ಅಧಿಕಾರ ಇಲ್ಲದಿದ್ದರೂ ಮನುಷ್ಯ ಇಚ್ಛೆಗೆ ಅಧೀನದಲ್ಲಿದ್ದು ನಡೆಯುವ ಇಚ್ಛಾಧೀನ ಕಾರ್ಯಗಳನ್ನು ನೋಡಿ ಮನುಷ್ಯ ನನ್ನ ಇಷ್ಟ ಎನ್ನುತ್ತಾನೆ. ಮನುಷ್ಯನನ್ನು ಭ್ರಮಿಸುವಂತೆ ಮಾಡುವ ಇಚ್ಛಾಧೀನ ಕಾರ್ಯಗಳೇ ಅಲ್ಲದೆ, ಶರೀರದಲ್ಲಿ ಮನುಷ್ಯನ ಪ್ರಮೇಯವಿಲ್ಲದೆ, ಮನುಷ್ಯನ ಇಚ್ಛೆ ಇಲ್ಲದೆ, ಮನುಷ್ಯನಿಗೆ ತಿಳಿಯದೇ ನಡೆಯುವ ಕೆಲಸಗಳು ಬಹಳ ಇವೆ. ಆದರೆ ಮನುಷ್ಯ ತನ್ನ ಅಜ್ಞಾನದಿಂದ ಅವುಗಳನ್ನು ಕುರಿತು ಯಾರು ಮಾಡುತ್ತಿದ್ದಾರೆಂದು ಯೋಚಿಸುವುದಿಲ್ಲ. ನಮ್ಮ ಶರೀರಗಳಲ್ಲಿ ಅನಿಚ್ಛಾಧೀನವಾಗಿ ನಡೆಯುವ ಕಾರ್ಯಗಳು ಬಹಳ ಇವೆ. ಕೈಯನ್ನು, ಕಾಲನ್ನು ಮನುಷ್ಯನ

ಇಷ್ಟದ ಪ್ರಕಾರ ಆತ್ಮ ಕೆಲಸ ಮಾಡಿಸುತ್ತಿರುವುದರಿಂದ, ಆ ಕೆಲಸ ತನ್ನ ಇಷ್ಟ ಪ್ರಕಾರ ನಡೆಯುತ್ತಿದೆಯೆಂದು, ತಾನೇ ಮಾಡುತ್ತಿದ್ದೇನೆಂದು ಮನುಷ್ಯ ಅಜ್ಞಾನದಿಂದ ಅಂದುಕೊಳ್ಳುತ್ತಿದ್ದಾನೆ. ಒಂದೊಂದು ಸಮಯದಲ್ಲಿ ಮನುಷ್ಯನ ಕಾಲಾಗಲಿ, ಕೈಯಾಗಲಿ ಮನುಷ್ಯನ ಇಷ್ಟ ಪ್ರಕಾರ ಕೆಲಸ ಮಾಡದೆ ಹೋಗುತ್ತದೆ. ಆಗ ಕೈಯನ್ನು, ಕಾಲನ್ನು ಮನುಷ್ಯ ಸ್ವಲ್ಪ ಮಾತ್ರವೂ ಸಹ ಅಲುಗಾಡಿಸುವುದಿಲ್ಲ. ಎಲ್ಲಾ ಚೆನ್ನಾಗಿದ್ದು ಕಾಲು ಕೆಲಸ ಮಾಡದಿರುವಾಗ ಅದಕ್ಕೆ ರೋಗ ಬಂದಿದೆಯೆಂದು ಅಂದುಕೊಳ್ಳುತ್ತಿದ್ದಾನೆ ಹೊರತು, ಇದಕ್ಕೆ ಮೂಲ ಕಾರಣವೇನೆಂದು ಆಗಲೂ ಸಹ ಯೋಚಿಸುವುದಿಲ್ಲ. ಶರೀರದಲ್ಲಿ ಎಷ್ಟೋ ರಹಸ್ಯ ಅಡಗಿದೆಯೆಂದು, ಆಧ್ಯಾತ್ಮಿಕವೆಲ್ಲಾ (ಆತ್ಮ ಅಧ್ಯಯನವೆಲ್ಲಾ) ಶರೀರದೊಳಗೆ ಇದೆಯೆಂದು ಮನುಷ್ಯನಿಗೆ ತಿಳಿಯದೆ ಹೋಗಿರುವುದರಿಂದ ಪ್ರವಕ್ತರು ಹೇಳಿದ ಜ್ಞಾನವನ್ನು ಶರೀರದಲ್ಲಿ ನೋಡಿಕೊಳ್ಳದೆ ಹೊರಗಿನ ಪ್ರಪಂಚದಲ್ಲಿ ನೋಡುತ್ತಿದ್ದಾರೆ. ಆದ್ದರಿಂದ ಪ್ರವಕ್ತರು ಹೇಳಿದ ಜ್ಞಾನ ಅರ್ಥವಾಗದೆ ಹೋಗಿದೆಯೆಂದು ಹೇಳಬಹುದು.

ಭಗವದ್ಗೀತೆಯಲ್ಲಿನ ಜ್ಞಾನವಾಗಲಿ, ಬೈಬಲ್‌ನ ವಾಕ್ಯಗಳನ್ನಾಗಲಿ, ಖುರಾನ್‌ನ ಆಯತ್‌ಗಳನ್ನಾಗಲಿ, ಕೆಲವನ್ನು ಅಂತರಂಗದೊಳಗೆ ನೋಡಿ ಕೊಳ್ಳಬೇಕಾದ ಅವಶ್ಯವಿದೆ. ಹೊರಗಿನ ಜೀವನ ವಿಧಾನಗಳು ಹಿರಿಯರು ಹೇಳಿದ್ದರೆ ಅವುಗಳನ್ನು ಹೊರಗಿನ ಪ್ರಪಂಚದಲ್ಲಿಯೇ ಅರ್ಥ ಮಾಡಿಕೊಂಡು ಆಚರಿಸಬೇಕು. ಅವೆಲ್ಲವೂ ನೀತಿ ನ್ಯಾಯಗಳಿಗೆ ಸಂಬಂಧಿಸಿದ ವಿಷಯಗಳಾಗಿ ಇರುವವು. ಶರೀರದೊಳಗಿನ ಜೀವಾತ್ಮನ ವಿಧಾನವನ್ನು ಹೇಳಿದ್ದರೆ ಅವುಗಳನ್ನು ಶರೀರದೊಳಗಿನ ವಿಷಯಗಳಾಗಿ ಅರ್ಥ ಮಾಡಿಕೊಂಡು ಆಚರಿಸಬೇಕು. ಅಂತರಂಗದಲ್ಲಿ ಅರ್ಥ ಮಾಡಿಕೊಂಡು ಆಚರಿಸುವವು ಎಲ್ಲವೂ ಜ್ಞಾನ, ಧರ್ಮಗಳಾಗಿ ಇರುವವು. **ಪ್ರಪಂಚ ಸಂಬಂಧವಾದ ನೀತಿ ನ್ಯಾಯಗಳಿಗಿಂತ ಪರಮಾತ್ಮ ಸಂಬಂಧ ಜ್ಞಾನ ಧರ್ಮಗಳು ಬಹಳ ದೊಡ್ಡವು**. ಆದ್ದರಿಂದ ದೈವಜ್ಞಾನವನ್ನು ದೈವಧರ್ಮಗಳನ್ನು ಅಂತರಂಗದಲ್ಲಿ ಅವಗಾಹನೆ

ಮಾಡಿಕೊಂಡರೆ ಜೀವಾತ್ಮನಿಗೆ ಸಮಾಧಿ ಶರೀರದಲ್ಲಿದೆಯೆಂದು, ಶರೀರಕ್ಕೆ ಸಮಾಧಿ (ಗೋರಿ) ಹೊರಗಿನ ಪ್ರಪಂಚದಲ್ಲಿದೆಯೆಂದು ತಿಳಿಯುತ್ತದೆ. ಪ್ರವಕ್ತರು ಹೇಳಿದ ಜ್ಞಾನವೆಲ್ಲವೂ ಚೈತನ್ಯವಂತನಾದ ಜೀವಾತ್ಮನನ್ನು ಕುರಿತೇ ಆಗಲಿ, ಚೈತನ್ಯವಿಲ್ಲದ ಜಡವಾದ ಶರೀರವನ್ನು ಕುರಿತಲ್ಲ. ಆದ್ದರಿಂದ ಜೀವಾತ್ಮವಿರುವ ಶರೀರವನ್ನು (ಸಮಾಧಿಯನ್ನು) ಕುರಿತೇ ಹೇಳಿಕೊಳ್ಳಬೇಕು. ಜೀವಾತ್ಮವಿಲ್ಲದ ಶರೀರವನ್ನು (ಶವವನ್ನು) ಕುರಿತು ಹೇಳಿಕೊಳ್ಳಬಾರದು.

ಇಲ್ಲಿಯವರೆಗೂ ಪ್ರವಕ್ತರು ಹೇಳಿದ ಸಮಾಧಿ ವಿಷಯಗಳನ್ನೇ ವಿವರಿಸಿ ಹೇಳಿದ್ದೇವೆ. ಇನ್ನೂ ಅವರು ಹೇಳದೆ ಬಿಟ್ಟ ವಿಷಯಗಳು ಬಹಳ ಇವೆ. ಅವುಗಳೆಲ್ಲವನ್ನು ಅವರು ಹೇಳದೆ ಬಿಟ್ಟಿದ್ದಾರೆ. ಪ್ರವಕ್ತರು ಹೇಳಿರುವುವೇ ಅಲ್ಲದೆ ಇನ್ನೂ ಕೆಲವು ಜ್ಞಾನ ವಿಷಯಗಳಿವೆಯೆಂದು ತಿಳಿಯುವಂತೆ ಪರಿಶುದ್ಧ ಬೈಬಲ್ ಗ್ರಂಥದಲ್ಲಿ ಯೋಹಾನು ಸುವಾರ್ತೆಯಲ್ಲಿ 16ನೇ ಅಧ್ಯಾಯದಲ್ಲಿ 12ನೇ ವಚನ ಹೀಗಿದೆ. **"ನಾನು ನಿಮ್ಮೊಂದಿಗೆ ಹೇಳಬೇಕಾಗಿರುವವು ಇನ್ನೂ ಅನೇಕ ಸಂಗತಿಗಳಿವೆ. ಆದರೆ ಈಗ ನೀವು ಅವುಗಳನ್ನು ಸಹಿಸಿಕೊಳ್ಳುವುದಿಲ್ಲ"** ಎಂದು ಏಸು ಹೇಳಿದಂತಿದೆ. ಅಷ್ಟೇ ಅಲ್ಲದೇ ಅದೇ ಬೈಬಲ್ ಗ್ರಂಥದಲ್ಲಿ, ಅದೇ ಯೋಹಾನು ಸುವಾರ್ತೆ 14ನೇ ಅಧ್ಯಾಯದಲ್ಲಿ 26ನೇ ವಾಕ್ಯ ಹೀಗಿದೆ. **"ಆದರಣ ಕರ್ತ ಎಂದರೆ ತಂದೆಯ ನಾಮದಿಂದ ಕಳುಹಿಸುವ ಪರಿಶುದ್ಧಾತ್ಮ ಸಮಸ್ತವನ್ನು ನಿಮಗೆ ಬೋಧಿಸಿ ನಾನು ನಿಮ್ಮೊಂದಿಗೆ ಹೇಳಿದ ಸಂಗತಿಗಳೆಲ್ಲವನ್ನು ನಿಮಗೆ ಜ್ಞಾಪಕ ಮಾಡುವನು"** ಎಂದು ಪ್ರವಕ್ತನಾದ ಏಸು ಹೇಳಿದ್ದಾನೆ. ಈ ವಾಕ್ಯಗಳನ್ನು ಅನುಸರಿಸಿದರೆ ತಿಳಿಯುವುದೇನೆಂದರೆ! ಪ್ರವಕ್ತ ಕೆಲವು ಜ್ಞಾನ ವಿಷಯಗಳೇ ಹೇಳಿದ್ದಾನೆಂದು, ಹೇಳಬೇಕಾಗಿರುವವು ಇನ್ನೂ ಇವೆಯೆಂದು, ಎಲ್ಲಾ ವಿಷಯಗಳನ್ನು ಹೇಳಿದಾಗಲೇ ಸಮಸ್ತವನ್ನು ಬೋಧಿಸಿದಂತಾಗುತ್ತದೆಂದು ತಿಳಿಯುತ್ತದೆ. ಹಲವು ಜನ ಪ್ರವಕ್ತರು ಇಲ್ಲಿಯವರೆಗೂ ಬಂದು ಹೋದರೂ, ಇನ್ನೂ ಪ್ರಸ್ತಾವನೆಗೆ ಬಾರದ ಜ್ಞಾನ ವಿಷಯಗಳು ಬಹಳ ಇವೆಯೆನ್ನುವುದಕ್ಕೆ ಆಧಾರಗಳಿವೆ. ನಾನು ಪ್ರವಕ್ತನಲ್ಲದೆ ಹೋದರೂ ನನಗೆ ತಿಳಿದಮಟ್ಟಿಗೆ,

ಇಲ್ಲಿಯವರೆಗೂ ಪ್ರಸ್ತಾವನೆಗೆ ಬಾರದಿರುವವು, ಪ್ರವಕ್ತರು ಹೇಳದ ವಿಷಯಗಳಲ್ಲಿ ಒಂದನ್ನಾದರೂ ಇಲ್ಲವೇ ಕೆಲವನ್ನಾದರೂ ನನ್ನೊಳಗಿನ ಆತ್ಮ ಒದಗಿಸಿದವುಗಳನ್ನು ನಿಮಗೆ ತಿಳಿಸಬೇಕೆಂದು ಅಂದುಕೊಳ್ಳುತ್ತಿದ್ದೇವೆ.

ಇಲ್ಲಿಯವರೆಗೂ ಸಮಾಧಿ ವಿಷಯದಲ್ಲಿ ಪ್ರವಕ್ತರು ಹೇಳಿರುವುದನ್ನೇ ವಿವರಿಸಿ ಹೇಳಿದ್ದೇವೆ. ಆದರೆ ಅದು ಒಂದು ವಿಸ್ಮಯವಾಗಿ ನಂಬಲಾರದ ವಿವರವಾಗಿ ಕಾಣಿಸಿರಬಹುದು. ಆದರೂ ಹೇತುಬದ್ಧ (ವೈಚಾರಿಕ) ವಾಗಿ ಯೋಚಿಸಿದರೆ ಯಾರಿಗಾದರೂ ನಾವು ಹೇಳಿರುವುದೇ ಸತ್ಯವೆಂದು ಅರ್ಥವಾಗಬಹುದು. ನನಗೆ ಇಷ್ಟವಾಗಿದೆ ಎಂದು ಒಬ್ಬ ಮನುಷ್ಯ ಅಂದರೆ ಅದು ದ್ವಂದ್ವ ಭಾವನೆಗಳಿಗೆ ದಾರಿ ಮಾಡಬಹುದು. ಅವನು ನನಗೆ ಇಷ್ಟವಾಗಿದೆ ಎಂದು ಹೇಳಿರಬಹುದು, ಇಲ್ಲವೇ ನನಗೆ ನೋವಾಗಿದೆ ಎಂದು ಹೇಳಿರಬಹುದು. ಒಂದೇ ವಾಕ್ಯ ಎರಡು ಅರ್ಥಗಳನ್ನು ಕೊಡುವಾಗ ಸಂದರ್ಭವನ್ನು ಅನುಸರಿಸಿ ಅಲ್ಲಿ ಯಾವ ಅರ್ಥ ಸರಿಯಾಗಿದೆಯೋ ಗುರುತಿಸಬಹುದು. ಅಲ್ಲಿ ಸಂದರ್ಭವನ್ನಾಗಲಿ, ನಡೆಯುತ್ತಿರುವ ಸಮಯವನ್ನಾಗಲಿ ಗುರುತಿಸದೆ ಇಷ್ಟವಾಗಿದೆ ಎನ್ನುವ ಪದವನ್ನು ಮಾತ್ರ ನೋಡಿದರೆ ಅದು ನೋವಾಗಿದೆ ಎಂದು ಮಾತ್ರವೇ ಅರ್ಥವಾಗಿರಬಹುದು. ಹಾಗಲ್ಲದೆ ಸಮಯ ಸಂದರ್ಭಗಳನ್ನನುಸರಿಸಿ ನೋಡಿದರೆ ಒಬ್ಬ ವ್ಯಕ್ತಿ ವಧುವನ್ನು ನೋಡಲು ಹೋದ ಸಂದರ್ಭದಲ್ಲಿ ಮದುಮಗಳನ್ನು ಎಲ್ಲರ ಸಮಕ್ಷಮದಲ್ಲಿ ನೋಡಿದ ಸಮಯದಲ್ಲಿ ಇಷ್ಟವಾಗಿದೆ ಎನ್ನುವ ಮಾತು ಬಂದರೆ, ಆ ಮಾತಿಗೆ ನೋವಾಗಿದೆ ಎಂದು ಅರ್ಥ ಮಾಡಿಕೊಂಡರೆ ಅದು ಅಸಂದರ್ಭ ಅರ್ಥವಾಗುತ್ತದೆ. ಇಷ್ಟವಾಗಿದೆ ಎನ್ನುವ ಮಾತಿಗೆ ನೋವಾಗಿದೆ ಎನ್ನುವ ಅರ್ಥವಿದ್ದರೂ, ಆ ಸಮಯದಲ್ಲಿ ಆ ಅರ್ಥವು ಕೆಲಸಕ್ಕೆ ಬಾರದು. ಹಾಗೆ ಮೂಲ ಗ್ರಂಥಗಳಲ್ಲಿ ಪ್ರವಕ್ತರು, ಪ್ರಳಯದಲ್ಲಿ ಎಂದು ಅಂದಾಗ, ಅದು ಯಾವ ಪ್ರಳಯವೋ ಸರಿಯಾಗಿ ಅರ್ಥ ಮಾಡಿಕೊಳ್ಳದೆ ಹೋದರೆ ಅಲ್ಲಿರುವ ಭಾವವೆಲ್ಲಾ ಕೆಟ್ಟು ಹೋಗುತ್ತದೆ. ಪ್ರಕೃತಿ ಚರ ಅಚರ ಅನ್ನುವ ಎರಡು ಪ್ರಕೃತಿಗಳಾಗಿ ಇರುವಾಗ,

ಎರಡು ಪ್ರಕೃತಿಗಳಿಗೂ ಪ್ರಳಯವಿರುವಾಗ ಅಲ್ಲಿ ಯಾವ ಪ್ರಕೃತಿಯನ್ನು ಕುರಿತು ಹೇಳಿದ್ದಾರೆ? ಯಾವ ಪ್ರಳಯವನ್ನು ಕುರಿತು ಹೇಳಿದ್ದಾರೆ ಎಂದು ಯೋಚಿಸದೆ ಹೋದರೆ ತಪ್ಪು ಭಾವನೆಯೊಳಗೆ ಹೋಗುವ ಅವಕಾಶವಿದೆ. ದಿವ್ಯ ಖುರಾನ್ ಗ್ರಂಥದಲ್ಲಿ ಹಜ್ರತ್ ಮಹಮ್ಮದ್ ಪ್ರವಕ್ತ ಹೇಳಿದ ಜ್ಞಾನ ವಿಷಯವನ್ನು ಮೊದಲು ಕೆಲವರು ತಪ್ಪುಭಾವನೆಯಿಂದ ಅರ್ಥ ಮಾಡಿಕೊಂಡಿರುವುದರಿಂದ, ಅವರಿಂದ ಅದೇ ಅರ್ಥ ಎಲ್ಲಾ ಕಡೆ ಹರಡಿ ಹೋಗಿರುವುದರಿಂದ, ಪ್ರವಕ್ತ ಯಾವ ಉದ್ದೇಶದಿಂದ ಹೇಳಿದ್ದಾನೋ ಆ ಉದ್ದೇಶ ಇಲ್ಲವೇ ಆ ಭಾವನೆ ಯಾರಿಗೂ ತಿಳಿಯದೇ ಹೋಗಿದೆ. ದೈವಸಂದೇಶದೊಳಗಿನ ನಿಜವಾದ ಸಾರಾಂಶವು, ನಂತರ ಬರುವ ಜನರು ಗ್ರಹಿಸಿಕೊಳ್ಳುವುದಕ್ಕೆ ಅವಕಾಶವಿಲ್ಲದೆ ಹೋಗಿದೆ.

ಬೈಬಲ್ ಗ್ರಂಥದಲ್ಲಿ ಯೋಹಾನನ ಸುವಾರ್ತೆಯಲ್ಲಿ 16ನೇ ಅಧ್ಯಾಯ 12ನೇ ವಚನದ ಪ್ರಕಾರ ದೇವರ ವಾಕ್ಯಗಳು ಇನ್ನೂ ಅನೇಕವನ್ನು ಪ್ರವಕ್ತರು ಹೇಳಬೇಕಾಗಿದ್ದರೂ, ಅವುಗಳನ್ನು ಹೇಳಿಲ್ಲವೆಂದು ತಿಳಿದಿದೆ. ಕಾರಣವನ್ನು ನೋಡಿದರೆ ಅದೇ ವಾಕ್ಯದಲ್ಲಿ "ಈಗ ನೀವು ಅವುಗಳನ್ನು ಸಹಿಸುವುದಿಲ್ಲ" ಎಂದಿದೆ. ಹಾಗೆ ಹೇಳಿರುವುದರಿಂದ ಜನರು ಮೊದಲೆ ತಪ್ಪು ಭಾವನೆಯಲ್ಲಿ ಮುಳುಗಿ ಹೋಗಿದ್ದಾರೆಂದು, ನಿಜವನ್ನು ಹೇಳಿದರೂ ಆ ವಿಷಯಗಳನ್ನು ಅರ್ಥ ಮಾಡಿಕೊಳ್ಳುವುದಿಲ್ಲವೆಂಬ ಭಾವನೆಯಿಂದ ಹೇಳದೆ ಹೋಗಿದ್ದಾರೆಂದು ತಿಳಿಯುತ್ತಿದೆ. ಹಾಗೆ ಹೇಳದೇ ಬಿಟ್ಟ ಅನೇಕ ಜ್ಞಾನ ಸಂಗತಿಗಳನ್ನು ನಾವು ನಮ್ಮ ಗ್ರಂಥಗಳಲ್ಲಿ ಕೆಲವನ್ನು ವಿವರಿಸಿದ್ದೇವೆ. ಈಗ ಇಲ್ಲಿಯವರೆಗೂ ಯಾರೂ ಹೇಳದ ಒಂದು ಜ್ಞಾನ ವಿಷಯವನ್ನು ತೆಗೆದುಕೊಂಡು ವಿವರಿಸಿಕೊಳ್ಳೋಣ. ಜ್ಞಾನ ವಿಷಯ ಹೊಸದಾಗಿರುವುದರಿಂದ, ತಿಳಿದ ಸತ್ಯ ಕೆಲವರಿಗೆ ಆನಂದವನ್ನು ನೀಡಿದರೆ, ಕೆಲವರಿಗೆ ಅಸೂಯೆಯನ್ನು ನೀಡಿ ಕೇಳಿದ ವಿಷಯ ಏಸು ಪ್ರಭು ಹೇಳಿದ ಹಾಗೆ, ಸಹಿಸಿಕೊಳ್ಳದೆ ಹೋಗಬಹುದು. ಅಸೂಯೆ ಎನ್ನುವ ಗುಣವನ್ನು ಪಕ್ಕಕ್ಕಿಟ್ಟು ನೋಡಿದರೆ ನಾವು ಹೇಳಿದ ಜ್ಞಾನ ವಿಷಯ ಹಲವು ಪ್ರಶ್ನೆಗಳಿಗೆ ಉತ್ತರವನ್ನು ಕೊಡುವುದಾಗಿ ಹೊಸ ಆನಂದವನ್ನು ಕೊಡುವುದಾಗಿರುತ್ತದೆ.

ದೈವಕ್ಕೆ ಸಂಬಂಧಿಸಿದ ಸಮಸ್ತ ವಿಷಯಗಳನ್ನು ಪರಿಶೀಲಿಸಿ ನೋಡಿದರೆ ಕಾಗೆ ಗೂಡಿನಲ್ಲಿ ಕೋಗಿಲೆ ಮೊಟ್ಟೆ ಇಟ್ಟಂತೆ, ಮಾಯೆ (ಸಾತಾನ್) ದೇವರ ಧರ್ಮಗಳಲ್ಲಿ ತನ್ನ ಧರ್ಮಗಳನ್ನು ಬೆರೆಸಿಟ್ಟಿದೆ. ಕಾಗೆ ಗೂಡಿನಲ್ಲಿ ಕೋಗಿಲೆಯ ಮೊಟ್ಟೆಯನ್ನು ಯಾರೂ ಗುರುತಿಸದ ಹಾಗೆ ಇರುವುದರಿಂದ ಇದು ಕಾಗೆಯ ಮೊಟ್ಟೆಯೆಂದು, ಇದು ಕೋಗಿಲೆ ಮೊಟ್ಟೆಯೆಂದು ಯಾರೂ ಹೇಳಲಾಗದೆ ಕಾಗೆಗೂಡಿನಲ್ಲಿರುವವೆಲ್ಲ ಕಾಗೆ ಮೊಟ್ಟೆಗಳೆಂದೇ ಅನ್ನುತ್ತಿದ್ದಾರೆ. ಅದೇ ವಿಧವಾಗಿ ಮಾಯೆ ತನ್ನ ಧರ್ಮಗಳನ್ನು ಯಾರೂ ಗುರುತಿಸದ ಹಾಗೆ ದೇವರ ಧರ್ಮಗಳೊಂದಿಗೆ ಬೆರೆಸಿರುವುದರಿಂದ ಜನರು ತಮಗೆ ತಿಳಿದ ಧರ್ಮಗಳಲ್ಲಿ ಯಾವುದು ದೈವಧರ್ಮ, ಯಾವುದು ಮಾಯೆ ಧರ್ಮ ಎಂದು ಗುರುತಿಸಲಾಗದೆ ತಮಗೆ ತಿಳಿದವುಗಳೆಲ್ಲ ದೇವರ ಧರ್ಮಗಳೆಂದುಕೊಳ್ಳುತ್ತಿದ್ದಾರೆ. ಕೆಲವರಿಗೇನೊ ದೇವರ ಧರ್ಮಗಳು ಮಾಯೆ ಧರ್ಮಗಳಾಗಿ, ಮಾಯೆ ಧರ್ಮಗಳು ದೇವರ ಧರ್ಮಗಳಾಗಿ ಕಾಣಿಸುತ್ತವೆ. ಕೆಲವರಲ್ಲೇನೊ ಮಾಯೆ ಧರ್ಮಗಳು ಚೆನ್ನಾಗಿ ಪ್ರಚಾರವಾಗಿ ಹೋಗಿವೆ. ಅಂತವರಿಗೆ ನಾವು ಹೇಳುವ ದೈವಧರ್ಮಗಳು ಹೊಸದಾಗಿ ಕಾಣಿಸುವುದೇ ಅಲ್ಲದೆ. ಅಸೂಯೆಯನ್ನು ಕಲ್ಪಿಸಿ ಸಹಿಸದ ಹಾಗೆ ಮಾಡುತ್ತಿವೆ.

ಯಾವುದು ಹೇಗಿದ್ದರೂ, ಯಾರು ಯಾವ ವಿಧದಲ್ಲಿ ಅರ್ಥ ಮಾಡಿಕೊಂಡರೂ ನಾವು (ನಾನು+ನನ್ನ ಆತ್ಮ) ಮಾತ್ರ ತಪ್ಪದೆ ಸತ್ಯವನ್ನೇ ಬೋಧಿಸುತ್ತಿದ್ದೇವೆ. ಯಾವ ಮತದಲ್ಲಾದರೂ ದೇವರ ವಾಕ್ಯಗಳಿಗೆ ಭಾವ ಲೋಪಗಳು ಏರ್ಪಟ್ಟಾಗ ಅವುಗಳನ್ನು ಸರಿತಿದ್ದಿ ನಿಜವಾದ ಭಾವವಿದು ಎಂದು ಹೇಳುವುದು ನಮ್ಮ ಕರ್ತವ್ಯ. ಆದ್ದರಿಂದ ನಾವು ಹಿಂದೂ (ಇಂದೂ) ಮತದಲ್ಲಿಯೇ ಅಲ್ಲದೆ ಕ್ರೈಸ್ತ, ಇಸ್ಲಾಮ್ ಮತಗಳಲ್ಲಿನ ದೈವಸಂದೇಶಗಳಿಗೆ ಭಾವಲೋಪ ಏರ್ಪಡಬಾರದೆಂದು, ಹಾಗೆ ಏರ್ಪಟ್ಟಿದ್ದರೆ ಅವುಗಳಿಗೆ ನಿಜ ಭಾವವನ್ನು ತಿಳಿಸುವುದಕ್ಕೆ ಪ್ರಯತ್ನಿಸುತ್ತೇವೆ. ಅಂತಹ ಪ್ರಯತ್ನದೊಳಗಿರುವುದೇ ಸಮಾಧಿಯ ವಿವರವನ್ನು ಹೇಳುವುದು ನಡೆದಿದೆ. ಪ್ರಕೃತಿಯಿಂದ ಕೂಡಿದ

ಶರೀರದಿಂದ ಪರಮಾತ್ಮ ಭಾಗವಾದ ಆತ್ಮ, ಜೀವಾತ್ಮ ಸೇರಿದ ಸಜೀವ ಶರೀರವನ್ನು ಸಮಾಧಿಯೆಂದು ಹೇಳಬಹುದೆಂದು ಸಹ ಹೇಳಿಕೊಂಡಿದ್ದೇವೆ. ಪ್ರಪಂಚದಲ್ಲಿ ಹುಟ್ಟಿದ ಜೀವರಾಶಿಗಳೆಲ್ಲರಿಗೂ ಶರೀರವನ್ನು ಕೊಟ್ಟ ಪ್ರಕೃತಿ ತಾಯಿಯಂತದ್ದೆಂದು, ಶರೀರದಲ್ಲಿ ಚೈತನ್ಯವನ್ನು ಕೊಟ್ಟ ಪರಮಾತ್ಮ ತಂದೆಯಂತವನೆಂದು ಕೂಡ ಹೇಳಿಕೊಂಡಿದ್ದೇವೆ. ನಿಮಗೆ ಮೊದಲು ಅರ್ಥವಾಗುವುದಕ್ಕೆ ಪ್ರಕೃತಿ ತಾಯಿಯಂತದ್ದೆಂದು, ಪರಮಾತ್ಮ ತಂದೆಯಂತ ವನೆಂದು ಮೊದಲು ಹೇಳಿದರೂ ಜನ್ಮ ಜನ್ಮಗಳಿಗೂ ನಿಜವಾದ ತಂದೆ ತಾಯಿ ಪ್ರಕೃತಿ ಪರಮಾತ್ಮನೆ. ಇದೇ ವಿಷಯವನ್ನೇ ಭಗವದ್ಗೀತೆ ಗುಣತ್ರಯಯೋಗ ಎನ್ನುವ ಅಧ್ಯಾಯದಲ್ಲಿ 3, 4 ಶ್ಲೋಕಗಳಲ್ಲಿ

***ಶ್ಲೋ॥ 3. ಮಮಯೋನಿ ರ್ಮಹದ್ಬ್ರಹ್ಮ ತಸ್ಮಿನ್ ಗರ್ಭಮ್ ದಧಾಮ್ಯಹಮ್,***
***ಸಂಭವ ಸ್ಸರ್ವ ಭೂತಾನಾಮ್ ತತೋ ಭರತಿ ಭಾರತ ॥***

***ಶ್ಲೋ॥ 4. ಸರ್ವಯೋನಿಷು ಕೌಂತೇಯ! ಮೂರ್ತಯಃ ಸಂಭವಂತಿ ಯಾಃ***
***ತಾಸಾಂ ಬ್ರಹ್ಮ ಮಹದ್ಯೋನಿಃ ಅಹಂ ಬೀಜ ಪ್ರದಃ ಪಿತಾ ॥***

**ಭಾವಾರ್ಥ :–** ಅಚೇತನ ಪ್ರಕೃತಿ ನನಗೆ ಪತ್ನಿಯಂತದ್ದು. ಅದಕ್ಕೆ ನಾನು ಪತಿಯಾಗಿ, ಬೀಜದಾತನಾಗಿದ್ದೇನೆ. ಆದ್ದರಿಂದ ನಮ್ಮಿಬ್ಬರಿಗೆ ಸಮಸ್ತ ಜೀವರಾಶಿಗಳು ಹುಟ್ಟುತ್ತಿವೆ. ಹೊರಗಿನ ಪ್ರಪಂಚದಲ್ಲಿ ಯಾವ ಯೋನಿಯಿಂದ (ಯಾವ ಗರ್ಭದಿಂದ) ಯಾವ ಆಕಾರದಿಂದ ಹುಟ್ಟಿದರೂ, ಸಕಲ ಜೀವರಾಶಿ ಗಳಿಗೆ ಶರೀರವನ್ನು ಕೊಟ್ಟ ತಾಯಿ ಪ್ರಕೃತಿಯಾದರೆ, ಅದಕ್ಕೆ ಬೀಜದಾತನಾದ ನಾನು (ಪರಮಾತ್ಮ) ತಂದೆಯೆಂದು ತಿಳಿಯಬೇಕು.

ಈಗ ನಿಜ ವಿಷಯಕ್ಕೆ ಬರೋಣ. ಪ್ರಕೃತಿಯಿಂದ ಶರೀರ ತಯಾರಾ ಗುತ್ತಿದೆ. ಪರಮಾತ್ಮ ಪ್ರಕೃತಿಗೆ ಬೀಜವನ್ನು ಕೊಡುತ್ತಿದ್ದಾನೆ. ಆದ್ದರಿಂದ ತಾಯಿ ಪ್ರಕೃತಿ, ತಂದೆ ಪರಮಾತ್ಮ ಎಂದು ತಿಳಿದಿದೆ. ಇದು ಮನುಷ್ಯರು ಹೇಳಿರುವುದಲ್ಲ, ದೇವರ ಸಂದೇಶ. ಆದರೆ ಈಗ ಒಂದು ಪ್ರಶ್ನೆ ನಮಗೆ ಬರಬಹುದು.

ಅದೇನೆಂದರೆ! ಈ ಮಧ್ಯೆ ವರ್ಷದ ಕೆಳಗೆ ಹೊಸದಾಗಿ ಮದುವೆಯಾದ ಜೋಡಿಗೆ ಹೊಸದಾಗಿ ಮಗ ಹುಟ್ಟಿದ್ದಾನೆ. ಆ ಮಗುವಿನ ತಂದೆ "ನನ್ನ ಮಗನ ನಾಮಕರಣಕ್ಕೆ ಎಲ್ಲರೂ ಹಾಜರಾಗಿ ಆಶೀರ್ವದಿಸಿ ಹೋಗಬೇಕೆಂದು" ಆಹ್ವಾನ ಪತ್ರಿಕೆಯನ್ನು ಅಚ್ಚುಹಾಕಿಸಿ ಹಂಚಿದ್ದಾನೆ. ಅವನೇನೊ ನನ್ನ ಮಗನಿಗೆ ಹೆಸರು ಇಡುತ್ತಿದ್ದೇವೆನ್ನುತ್ತಿದ್ದಾನೆ. ಇಲ್ಲೇನೋ ಭಗವದ್ಗೀತೆಯಲ್ಲಿ ಯಾರ ಮಗನಾದರೂ ಅವನು ನನ್ನ ಮಗನೆ ಎಂದು ದೇವರು ಹೇಳಿದ್ದಾನೆ. ಯಾವುದು ನಿಜವೆಂದು ಯೋಚಿಸಿದರೆ, ನಾವು ನೋಡುತ್ತಿದ್ದ ಹಾಗೆ ಮದುವೆ ಮಾಡಿಕೊಂಡು ಪತ್ನಿಯೊಂದಿಗೆ ಪತಿ ಸಂಸಾರ ಮಾಡಿ ಮಗನನ್ನು ಹೆತ್ತ ತಂದೆ ತಾಯಿ ಇವರೆ. ಇವರು ಮದುವೆ ಮಾಡಿಕೊಂಡಿರುವುದು, ದಾಂಪತ್ಯ ಜೀವನವನ್ನು ಕಳೆದಿರುವುದು, ಸಂತಾನವನ್ನು ಹೊಂದಿರುವುದು ಇವರೆ ಎಂದು ಪ್ರತ್ಯಕ್ಷವಾಗಿ ನಮಗೆ ತಿಳಿದಿದೆ. ಆದರೆ ಯಾವ ಹೆಂಡತಿಗೆ ಯಾರು ಗಂಡನಾದರೆ ನನಗೇನು, ಹುಟ್ಟಿದವನು ನನ್ನ ಮಗ ಎನ್ನುವುದು ದೇವರಿಗೆ ನ್ಯಾಯವೆ ಎಂದು ಯಾರಾದರೂ ಕೇಳಬಹುದು. ಅದಕ್ಕೆ ಈಗ ಉತ್ತರ ಹೇಳಬೇಕಾಗಿರುವುದು ನಾವೆ! ಹೇಳುತ್ತೇವೆ ಕೇಳಿರಿ. ಒಬ್ಬರು ಯಾರೊಂದಿಗಾದರೂ ಮಾತನಾಡುತ್ತಿರುವಾಗ 'ಆ ನನ್ನ ಮಗ, ಈ ನನ್ನ ಮಗ' ಎಂದು ಯಾರಿಗಾದರೂ ಅನ್ನುತ್ತಿರುತ್ತಾರೆ. ಅವನು ಮಾಡಿದ ಮೋಸ ದೊಡ್ಡದು ಎನ್ನಲು ಹೋಗಿ, ಆ ನನ್ನ ಮಗ ಮಾಡಿದ ಮೋಸ ದೊಡ್ಡದು ಅನ್ನುತ್ತಿರುತ್ತಾರೆ. ಯಾರನ್ನಾದರೂ ದೂಷಿಸುವಾಗ ನನ್ನ ಮಗನೇ ಎಂದನ್ನುತ್ತಿರುತ್ತಾರೆ. ಕೆಲವರು ತಿಳಿಯದೆಯೇ ಇತರ ವ್ಯಕ್ತಿಯನ್ನು ನನ್ನ ಮಗನೆ ಎಂದು ಎನ್ನುತ್ತಿರುತ್ತಾರೆ. ನಿಜಕ್ಕೂ ದೂಷಿಸುವ ವ್ಯಕ್ತಿಗೆ ಎದುರಿಗಿರುವ ವ್ಯಕ್ತಿ ಮಗನಲ್ಲದಿದ್ದರೂ ಆ ಮಾತೆನ್ನುವುದು ನ್ಯಾಯವೇ ಎಂದು ಕೇಳಿದರೆ ನ್ಯಾಯವಲ್ಲವೆಂದೇ, ಹಾಗೆನ್ನುವುದು ಸರಿಯಾದ ಪದ್ಧತಿಯಲ್ಲವೆಂದೇ ಹೇಳಬಹುದು. ಹೊರಗಿನ ವ್ಯಕ್ತಿ ಮತ್ತೊಬ್ಬ ವ್ಯಕ್ತಿಯನ್ನು ನನ್ನ ಮಗನೆ ಎಂದರೆ ಅದು ಅನ್ಯಾಯ ಆಗಿರುವಾಗ, ಅಷ್ಟು ದೊಡ್ಡ ದೇವರು, ಗಂಡ ಹೆಂಡತಿಯರಿಗೆ ಎಲ್ಲ ಆಧಾರಗಳಿಂದ ಹುಟ್ಟಿದ ಶಿಶುವನ್ನು ನನ್ನ ಮಗ ಎನ್ನುವುದು ದೊಡ್ಡ ಅನ್ಯಾಯವಾಗುತ್ತದೆ ಎಂದು ಯಾರಾದರೂ ಅನ್ನಬಹುದು. ಆದರೆ ದೈವ

ಧರ್ಮಗಳ ಪ್ರಕಾರ ನೋಡಿದರೆ ನ್ಯಾಯ ಅನ್ಯಾಯ, ನೀತಿ ಅವಿನೀತಿ ಪ್ರಪಂಚದಲ್ಲಿ ಜೀವನ ಸಾಗಿಸುವವರಿಗೆ ಮಾತ್ರ ಅನ್ವಯಿಸುತ್ತದೆ. ದೇವರಿಗೆ ನೀತಿ ನ್ಯಾಯಗಳು ಅನ್ವಯಿಸುವುದಿಲ್ಲ. ಅವನಿಗೆ ಅನ್ವಯಿಸುವವು ಜ್ಞಾನಧರ್ಮಗಳು ಮಾತ್ರ. ಆದ್ದರಿಂದ ಇತರರಿಗೆ ಹುಟ್ಟಿದವನನ್ನು ದೇವರು ನನ್ನ ಮಗ ಎನ್ನುವುದು ಜ್ಞಾನವೇ? ಧರ್ಮವೇ? ಎಂದು ಕೇಳಬಹುದು. ಆದರೆ ನೀತಿಯೇ ನ್ಯಾಯವೇ ಎಂದು ಕೇಳಬಾರದು. ಸರಿ ಭಗವದ್ಗೀತೆಯಲ್ಲಿ ದೇವರು ಎಲ್ಲರಿಗೂ ತಾಯಿ ಪ್ರಕೃತಿ, ತಂದೆ ನಾನು ಎಂದು ಅಂದಾಗ ಇದು ಧರ್ಮವೇ? ಎಂದು ಕೇಳಬಹುದು.

ಭೂಮಿ ಮೇಲೆ ಯಾರು ಯಾರಿಗೆ ಹುಟ್ಟಿದರೂ ಅವರಿಗೆ ತಂದೆ ನಾನೇ ಎಂದು ಹೇಳುವುದು, ನೋಡುವುದಕ್ಕೆ ಅಧರ್ಮವಾಗಿ ಕಾಣಿಸಿದರೂ ನಿಜಕ್ಕೂ ಅವನು ಹೇಳಿದ ಮಾತು ಧರ್ಮವೆಂದೇ ಹೇಳಬಹುದು. ದೇವರ ಮಾತು ಧರ್ಮವೆಂದು ಹೇಳುವುದರಿಂದ ಇವನು ಅಸತ್ಯವಾದಿಯೆಂದು ನನ್ನನ್ನು ನೀವೆಂದುಕೊಂಡರೂ ಪರವಾಗಿಲ್ಲ. ಆದರೆ ಧರ್ಮಪರವಾಗಿ ದೇವರು ಪ್ರತಿ ಮನುಷ್ಯನಿಗೂ, ಪ್ರತಿ ಜೀವರಾಶಿಗೂ ತಂದೆಯೆಂದೇ ಹೇಳಬಹುದು. ಇದೇ ವಿಷಯವನ್ನೇ ಬೈಬಲ್‌ನಲ್ಲಿ ಮತ್ತಯಿ ಸುವಾರ್ತೆ 9ನೇ ವಾಕ್ಯದಲ್ಲಿ ಹೀಗಿದೆ. **"ಭೂಮಿ ಮೇಲೆ ಯಾರನ್ನಾದರೂ ತಂದೆ ಎಂದು ಹೆಸರಿಟ್ಟು ಕರೆಯಬೇಡ. ಒಬ್ಬನೇ ನಿಮ್ಮ ತಂದೆ, ಅವನು ಪರಲೋಕದಲ್ಲಿದ್ದಾನೆ."** ಈ ಮಾತನ್ನು ಏಸು ಸ್ವತಃ ಹೇಳಿದ್ದಾನೆ. ಬೈಬಲ್‌ನಲ್ಲಿ ಏಸು ಪ್ರವಕ್ತ ಹೇಳಿರುವುದು, ಭಗವದ್ಗೀತೆಯಲ್ಲಿ ಎಲ್ಲರಿಗೂ ಬೀಜದಾತನಾದ ನಾನೇ ತಂದೆಯೆಂದು ಹೇಳಿರುವುದಕ್ಕೆ ಸರಿಹೋಗಿದೆ. ಕಾಣಿಸುವ ತಾಯಿತಂದೆಯರ ವಿಷಯಕ್ಕೆ ಬಂದರೆ ಸಾಮಾಜಿಕ ಜೀವನದಲ್ಲಿ ಕಾಣಿಸುವ ತಾಯಿತಂದೆ ಇದ್ದರೂ ಆಧ್ಯಾತ್ಮಿಕ ವಿಧಾನದಲ್ಲಿ ಪ್ರತಿ ಜನ್ಮಕ್ಕೂ ತಾಯಿತಂದೆ ಕಾಣಿಸದೇ ಇದ್ದಾರೆ. ಕಾಣಿಸುವ ತಾಯಿತಂದೆ ಪ್ರಸ್ತುತ ಜನ್ಮಕ್ಕೆ ತಾಯಿತಂದೆಯರಾದರೆ, ಪ್ರಕೃತಿ ಪರಮಾತ್ಮ ಎಲ್ಲ ಜನ್ಮಗಳಿಗೂ, ಎಲ್ಲರಿಗೂ ತಾಯಿ ತಂದೆಯರಾಗಿ ಇದ್ದಾರೆ. ಪ್ರಕೃತಿ ಪರಮಾತ್ಮರೆನ್ನುವವರು ನಿಜವಾದ

ತಾಯಿತಂದೆಯರಾಗಿ ಇದ್ದಾರೆನ್ನುವ ಮಾತು ಕೆಲವರು ಕೇಳಿದರೂ ಅವರಲ್ಲಿ ಸ್ವಲ್ಪವಾದರೂ ಸ್ಪಂದನೆಯಾಗಲಿ, ಹೊಸ ವಿಷಯ ತಿಳಿದಿರುವುದಕ್ಕೆ ಆಶ್ಚರ್ಯವಾಗಲಿ ವ್ಯಕ್ತಪಡಿಸದೆ ಹೇಳಿದವನ ಕಡೆ ದೈನ್ಯತೆಯಿಂದ ನೋಡುವರು. ಹೇಳುವವರು ಬುದ್ಧಿಸ್ಥಿಮಿತ ಇಲ್ಲದವರಾಗಿ ಕಾಣಿಸುವುದರಿಂದ ಅವರು ಕೇಳಿದ ವಿಷಯವನ್ನು ಕುರಿತು ಗಮನಿಸಿಕೊಳ್ಳುವುದಿಲ್ಲ. ಏಕೆಂದರೆ! ಆ ಮಾತು ಅಸತ್ಯವೆಂದು, ಹೇಳುವವನಿಗೆ ಬುದ್ಧಿ ಇಲ್ಲವೆಂದು ಅನುಕಂಪದಿಂದ ನೋಡುತ್ತಾರೆ. ಇನ್ನೂ ಕೆಲವರು ಪ್ರಕೃತಿ ಪರಮಾತ್ಮ ಎನ್ನುವವರು ಸಹ ಮನುಷ್ಯರೇ ಅಂದುಕೊಂಡು, ಅವರು ಹೆತ್ತು, ಇವರಿಗೆ ಕೊಟ್ಟಿದ್ದಾರೇನೋ ಪ್ರಸ್ತುತ ಇರುವವರು  ಬೆಳೆಸಿದ ತಾಯಿತಂದೆಯರೇನೊ ಎಂದು ಅಂದು ಕೊಳ್ಳುತ್ತಿದ್ದಾರೆ. ಕೆಲವರು ವಿಜ್ಞಾನಿಗಳಾದರೆ ವಿಜ್ಞಾನ ಸಂಶೋಧನೆ ಪ್ರಕಾರ ತಂದೆಯ ವೀರ್ಯಕಣದಿಂದ, ತಾಯಿಯ ಅಂಡಾಣುವಿನಿಂದ ಮನುಷ್ಯ ಹುಟ್ಟಿದ್ದರೆ, ಕಣವಾಗಲಿ, ಅಂಡಾಣುವಾಗಲಿ ಇಲ್ಲದವರ ಹೆಸರು ಹೇಳುವುದು ಏನೆಂದು ಹಾಸ್ಯಾಸ್ಪದವಾಗಿ ಮಾತನಾಡುವರು. ಈ ರೀತಿ ಮೂಲ ಗ್ರಂಥಗಳಲ್ಲಿ ದೇವರು ಹೇಳಿದ ಮಾತನ್ನು ಹೇಳಿದರೂ ಪ್ರಜೆಗಳು ಕೇಳುವ ಸ್ಥಿತಿಯಲ್ಲಿ ಇಲ್ಲ. ಹೇಳಿದವನನ್ನು ಮೂಢನಂಬಿಕೆಯವನನ್ನಾಗಿಯೋ, ಬುದ್ಧಿಹೀನ ನನ್ನಾಗಿಯೋ ಅಂದುಕೊಳ್ಳುತ್ತಿದ್ದಾರೆ.

ಯಾರು ಏನೆಂದುಕೊಂಡರೂ, ಎಷ್ಟು ವಿಧಗಳಲ್ಲಿ ನೋಡಿದರೂ ನಿಜವಾಗಿ ಪ್ರಕೃತಿಯಿಂದ ಶರೀರ, ಪರಮಾತ್ಮನಿಂದ ಚಲನೆ ಶಕ್ತಿ, ಜೀವಾತ್ಮನು ಏರ್ಪಡುವುದರಿಂದ ಪ್ರಕೃತಿ ತಾಯಿ, ಪರಮಾತ್ಮ ತಂದೆಯಾಗುವುದು ವಾಸ್ತವವಾದ ಮಾತೇ ಅಲ್ಲದೆ ಶಾಸ್ತ್ರಸಮ್ಮತವಾದದ್ದೆಂದು, ಧರ್ಮಯುಕ್ತವಾದದ್ದೆಂದು ಸಹ ತಿಳಿಯುತ್ತಿದೆ. ಕಲ್ಪಿಸಿಕೊಂಡು ಮಾತನಾಡುವುದು ಬೇರೆ, ಶಾಸ್ತ್ರಬದ್ಧತೆಯಿಂದ ಮಾತನಾಡುವುದು ಬೇರೆ. ಉದಾಹರಣೆಗೆ ಹೇಳಬೇಕೆಂದರೆ ಅಷ್ಟಾದಶ (18) ಪುರಾಣಗಳು ಕಲ್ಪಿಸಿಕೊಂಡು ಹೇಳಿರುವವು. ಅವು ಶಾಸ್ತ್ರಗಳಲ್ಲ, ಕೆಲವು ಸುಳ್ಳನ್ನು, ಕೆಲವು ನಿಜವನ್ನು ಹುಟ್ಟಿಸಿ ಹೇಳಿರುವವು ಪುರಾಣಗಳು. ಶಾಸ್ತ್ರಗಳು ಅಂತವುಗಳಲ್ಲ,

ಶಾಸ್ತ್ರ ಸತ್ಯ ಸ್ವರೂಪದಿಂದ ಕೂಡಿರುತ್ತದೆ. ಶಾಸ್ತ್ರ ಶಾಶ್ವತ. ಎಂದಿಗೂ ಬದಲಾಗುವಂತದ್ದಲ್ಲ. ಭೂಮಿಯ ಮೇಲೆ ಆರು ಶಾಸ್ತ್ರಗಳೇ ಇವೆ. ಅದರಲ್ಲಿ ಎಲ್ಲದಕ್ಕಿಂತ ದೊಡ್ಡದು, ಎಲ್ಲದಕ್ಕಿಂತ ಮೊದಲು ಹುಟ್ಟಿರುವುದು ಬ್ರಹ್ಮವಿದ್ಯಾಶಾಸ್ತ್ರ. ಆದರೆ ಮೊದಲಿನಿಂದ ಕ್ರಮವಾಗಿ ಕೊನೆಯಲ್ಲಿ ಹೇಳಲ್ಪಡುತ್ತಿದೆ. ಉಳಿದ ಐದು ಶಾಸ್ತ್ರಗಳು ನಂತರ ಹುಟ್ಟಿದವುಗಳೆಂದು ಕ್ರಮವಾಗಿ ಮೊದಲು ಹೇಳಲ್ಪಡುತ್ತವೆ. ಶಾಸ್ತ್ರಗಳು ಆರು ಹೀಗೆ ಕ್ರಮವಾಗಿ ಇವೆ. 1) ಗಣಿತ ಶಾಸ್ತ್ರ 2) ಖಗೋಳಶಾಸ್ತ್ರ 3) ರಸಾಯನಶಾಸ್ತ್ರ 4) ಭೌತಿಕಶಾಸ್ತ್ರ 5) ಜ್ಯೋತಿಷ್ಯಶಾಸ್ತ್ರ 6) ಬ್ರಹ್ಮವಿದ್ಯಾಶಾಸ್ತ್ರ. ಆರನೇ ಶಾಸ್ತ್ರವಾದ ಬ್ರಹ್ಮವಿದ್ಯಾಶಾಸ್ತ್ರವನ್ನು ಯೋಗಶಾಸ್ತ್ರ ವೆಂದು ಸಹ ಹೇಳಬಹುದು. ಮನುಷ್ಯನ ಜನನ ಮರಣಗಳೂ, ಕರ್ಮ ವಿಧಾನಗಳೂ, ಆತ್ಮ ಅಧ್ಯಯನಗಳೂ, ಜೀವಾತ್ಮ ಅನುಭೂತಿಗಳೂ ಎಲ್ಲವೂ ಬ್ರಹ್ಮ ವಿದ್ಯಾ ಶಾಸ್ತ್ರಕ್ಕೆ ಸಂಬಂಧಿಸಿರುವವು. ಆದ್ದರಿಂದ ಆಧ್ಯಾತ್ಮಿಕದಲ್ಲಿ ಇರುವ ವೆಲ್ಲವೂ ಶಾಸ್ತ್ರಬದ್ಧವಾಗಿರುವವು. ಒಂದು ವೇಳೆ ಯಾರಾದರೂ ಆಧ್ಯಾತ್ಮಿಕವಲ್ಲದ ವಿಷಯಗಳನ್ನು ಆಧ್ಯಾತ್ಮಿಕವೆಂದೇ ಹೇಳಿದರೂ ಅವು ಸತ್ಯವಾಗುವುದಿಲ್ಲ, ಶಾಸ್ತ್ರಬದ್ಧವಲ್ಲದವುಗಳಾಗಿರುತ್ತವೆ. ಕೆಲವು ಕಡೆ ದೈವಜ್ಞಾನ ವಿಷಯಗಳಲ್ಲಿ ಮಾಯೆ ಜ್ಞಾನ ಬೆರೆತುಹೋಗಿ ಯಾರೂ ಗುರುತಿಸದ ಹಾಗಿದ್ದರೂ ಬ್ರಹ್ಮವಿದ್ಯಾ ಶಾಸ್ತ್ರವನ್ನು ತಿಳಿದವರು, ಶಾಸ್ತ್ರಬದ್ಧತೆಯಿಲ್ಲದ ಮಾಯೆ ಜ್ಞಾನಗಳನ್ನು ತಕ್ಷಣವೇ ಗುರುತು ಹಿಡಿಯಬಹುದು. ಈ ವಿಧಾನದಿಂದಲೇ ದೈವಸಂದೇಶಗಳಾದ ಮೂಲಗ್ರಂಥಗಳಲ್ಲಿ ಕಾಗೆ ಗೂಡಿನಲ್ಲಿ ಕೋಗಿಲೆ ಮೊಟ್ಟೆಗಳು ಬೆರೆತುಹೋದಂತೆ, ಕಳ್ಳನಾಗಿ ಬೆರೆತುಹೋದ ಮಾಯೆ ಜ್ಞಾನವನ್ನು ಕಂಡುಹಿಡಿದು ಅವುಗಳನ್ನು ತೆಗೆದುಹಾಕಬಹುದು. ನಾವು ಬರೆದ **“ತ್ರೈತಸಿದ್ಧಾಂತ ಭಗವದ್ಗೀತೆ”**ಯಲ್ಲಿ ಮಾಯೆಜ್ಞಾನ ಶ್ಲೋಕಗಳನ್ನು ತೆಗೆದು ಹಾಕಿ ಬರೆಯಲಾಗಿದೆ.

ಬ್ರಹ್ಮವಿದ್ಯಾಶಾಸ್ತ್ರದ ಪ್ರಕಾರ ಒಬ್ಬ ಜೀವಾತ್ಮನಿಗೆ ತಾಯಿ ಪ್ರಕೃತಿ, ತಂದೆ ಪರಮಾತ್ಮ ಎನ್ನುವ ಮಾತು ಶಾಸನ ಮತ್ತು ವಾಸ್ತವ. ಆದರೆ ನಾವು ನೋಡುತ್ತಿದ್ದಂತೆ ಎಲ್ಲರೂ, ಕಾಣಿಸುವ ತಾಯಿತಂದೆಯರಿಗೆ ಹುಟ್ಟಿದಂತೆ ತಿಳಿಯುತ್ತಿದೆ. ಆದರೆ ಪ್ರಕೃತಿ ಪರಮಾತ್ಮರಿಗೆ ಹುಟ್ಟುವಂತೆ ಎಲ್ಲಿಯೂ ಪ್ರತ್ಯಕ್ಷವಾಗಿ

ತಿಳಿಯುವುದೇ ಇಲ್ಲ ಎಂದು ಕೇಳಬಹುದು. ಈ ಪ್ರಶ್ನೆಗೆ ನಾವು ಉತ್ತರ ಹೇಳುವುದಕ್ಕೆ ಮೊದಲು ಒಂದು ಉದಾಹರಣೆಯನ್ನು ಹೇಳಿಕೊಳ್ಳೋಣ. ನಾವು 1980ರಲ್ಲಿ "ಜನನ ಮರಣ ಸಿದ್ಧಾಂತ" ಎನ್ನುವ ಒಂದು ಸಂಚಲನಾತ್ಮಕ ಗ್ರಂಥವನ್ನು ಬರೆಯಲಾಗಿದೆ. ಅದು ಎಲ್ಲ ಗ್ರಂಥಗಳ ಹಾಗೆ ಸಾಮಾನ್ಯವಾದ ಗ್ರಂಥವಲ್ಲ. ಯಾರಿಗೂ ತಿಳಿಯದ ಸಾವುಹುಟ್ಟುಗಳ ವಿಷಯಗಳನ್ನು ಸಿದ್ಧಾಂತವಾಗಿ ಬರೆದ ಗ್ರಂಥವದು. ಆ ಒಂದು ಗ್ರಂಥವನ್ನು ಬರೆಯುವುದಕ್ಕೆ 45 ದಿನಗಳು ಬೇಕಾಯಿತು. ಆ ಗ್ರಂಥವನ್ನು ಬರೆಯುವುದಕ್ಕೆ ಬಹಳ ಯೋಚನೆ ಮಾಡಬೇಕಾಗಿ ಬಂತು. ಹಾಗೆಯೇ ಎಷ್ಟೋ ಆಧಾರಗಳನ್ನು ಸಂಗ್ರಹಿಸಿ ಬರೆಯಬೇಕಾಯಿತು. ಹಾಗೆ 45 ದಿನಗಳು ಕಷ್ಟಪಟ್ಟು ಒಂದು ಪ್ರತಿಯನ್ನು ತಯಾರು ಮಾಡಿದ್ದೇವೆ. ಆಗ ಅದು "ಜನನ ಮರಣ ಸಿದ್ಧಾಂತ" ಎನ್ನುವ ಒಂದು ಗ್ರಂಥವಾಗಿ ಪೂರ್ತಿ ತಯಾರಾಯಿತು. ನಂತರ ಅಂತಹ ಗ್ರಂಥಗಳನ್ನು ಕೆಲವು ಸಾವಿರ ಸಂಖ್ಯೆಯಲ್ಲಿ ತಯಾರು ಮಾಡುವುದಕ್ಕೆ, ಮೊದಲ ಲೇಖಕನಿಂದ ಬರೆದ ಗ್ರಂಥಕ್ಕೆ ಮಾದಿರಿಯನ್ನು ತಯಾರು ಮಾಡಿ ಅದರಂತಿರುವ ಎಷ್ಟು ಜನನ ಮರಣ ಸಿದ್ಧಾಂತ ಗ್ರಂಥಗಳನ್ನಾದರೂ ತಯಾರು ಮಾಡಬಹುದು. ಒಂದು ಬಾರಿ ಬರೆದ ನಂತರ ಹಾಗೆ ಶ್ರಮಪಟ್ಟು ಉಳಿದ ಅಂತಹ ಗ್ರಂಥಗಳನ್ನು ಬರೆಯಬೇಕಾದ ಅಗತ್ಯವಿಲ್ಲ. ಮೊದಲ ಗ್ರಂಥದ ಮಾದಿರಿಯನ್ನು ತಯಾರು ಮಾಡಿಕೊಂಡು, ಆ ಮಾದಿರಿಯ ಪ್ರಕಾರ 45 ದಿನಗಳಲ್ಲಿ 45 ಸಾವಿರ ಗ್ರಂಥಗಳನ್ನು ತಯಾರು ಮಾಡಬಹುದು. ಆದರೆ ಇಲ್ಲಿ ಮೊದಲು ಬರೆದಿರುವುದು ಬರೆದ ಗ್ರಂಥವಾದರೆ, ನಂತರ ಅದೇ ಮಾದಿರಿಯಿಂದ ತಯಾರಾದ ಗ್ರಂಥಗಳೆಲ್ಲ ಮಾಡಿದ ಗ್ರಂಥಗಳಾಗಿವೆ. ಬರೆದ ಗ್ರಂಥಗಳಲ್ಲಿನ ವಿಷಯವೇ ಮಾಡಿದ ಗ್ರಂಥಗಳಲ್ಲಿದ್ದರೂ ಮೊದಲು ಬರೆದ ಗ್ರಂಥ ಮೂಲಗ್ರಂಥವಾದರೆ, ನಂತರ ಅದರ ಪ್ರಕಾರ ಅದರಂತೆ ತಯಾರಾಗಿರುವವು ಎಷ್ಟಾದರೂ, ಅವೆಲ್ಲವೂ ಅದರ ಮಾದರಿಯಿಂದ ತಯಾರಾದವುಗಳೇ ಆಗಲಿ ಮೂಲ ಗ್ರಂಥಗಳಾಗಲಾರವು. ನಂತರ ಸಾವಿರ ಸಂಖ್ಯೆಯಲ್ಲಿ ತಯಾರಾದ "ಜನನ ಮರಣ ಸಿದ್ಧಾಂತ" ಎನ್ನುವ ಗ್ರಂಥಗಳಿಗೆ ಲೇಖಕ ಮೊದಲು ಬರೆದ ವ್ಯಕ್ತಿಯಾಗಿ ನಮ್ಮ ಹೆಸರೇ

ಇದೆ. ಆದರೂ ನಾನು ಮೊದಲು ಒಂದು ಗ್ರಂಥವನ್ನೇ ಬರೆದಿದ್ದೇನೆ. ಉಳಿದ ಅಂತಹ ಗ್ರಂಥಗಳನ್ನು ಮೊದಲ ಗ್ರಂಥಕ್ಕೆ ಶ್ರಮಪಟ್ಟು ಬರೆದಂತೆ ಬರೆಯಲಿಲ್ಲ. ಆಗ 45 ದಿನಗಳಿಗೆ ಒಂದು ಗ್ರಂಥವನ್ನು ಮಾತ್ರ ಬರೆದರೆ, ಈಗ 45 ದಿನಗಳಲ್ಲಿ 45 ಸಾವಿರ ಗ್ರಂಥಗಳು ತಯಾರಾಗಿವೆ. ನಂತರ ತಯಾರಾದ ಎಲ್ಲವನ್ನು ಬರೆಯದಿದ್ದರೂ ನಾವು ಬರೆದ ಮಾದರಿಯಿಂದಲೇ ತಯಾರಾದ ಗ್ರಂಥ ಗಳಾಗಿರುವುದರಿಂದ ಅವುಗಳಿಗೆ ಲೇಖಕನಾಗಿ ನನ್ನ ಹೆಸರೇ ಇದೆ. ಇದನ್ನು ಅನುಸರಿಸಿದರೆ ಮೊದಲ ಲೇಖಕ ಒಂದು ಗ್ರಂಥವನ್ನು ಬರೆದರೆ, ನಂತರ ಬರೆಯದಿದ್ದರೂ ಅದೇ ಮಾದರಿಯಿಂದ ತಯಾರಾದ ಗ್ರಂಥಗಳೆಲ್ಲವುಗಳಿಗೆ ಅದೇ ಹೆಸರು ಇರುತ್ತದೆ. ಅದೇ ಲೇಖಕ ಇರುವನು. ಮೊದಲು ಬರೆದ ಪುಸ್ತಕವನ್ನು ನಂತರ ಹಲವು ಪುಸ್ತಕಗಳಾಗಿ ಮಾಡುತ್ತಿದ್ದೇವೆ. ಆದ್ದರಿಂದ ಮೊದಲ ಪುಸ್ತಕವನ್ನು ಬರೆದ ಪುಸ್ತಕವೆಂದರೆ ನಂತರ ತಯಾರಾದ ಪುಸ್ತಕಗಳನ್ನು ಮಾಡಿದ ಪುಸ್ತಕಗಳು ಎನ್ನುತ್ತಿದ್ದೇವೆ. ಮೊದಲು ಬರೆದಿರುವು ದರೊಳಗೂ, ನಂತರ ಬರೆದಿರುವುದರೊಳಗೂ ಒಂದೇ ವಿಷಯವಿರುತ್ತದೆ. ಒಬ್ಬ ಬರಹಗಾರನ ಹೆಸರಿರುತ್ತದೆ. ಅವು ಒಂದೇ ಆದರೂ ಮೊದಲನೆಯದು ಬರೆದಿರುವುದು, ನಂತರದ್ದು ತಯಾರಾದದ್ದು. ಈ ವಿಷಯವೆಲ್ಲವೂ ಹೇಳಬಹುದಾದ ವಿಷಯ ಅರ್ಥವಾಗುವುದಕ್ಕೆ ಉದಾಹರಣೆಯಾಗಿ ಹೇಳಿರುವಂತದ್ದೆ.

ಈಗ ನಿಜ ವಿಷಯಕ್ಕೆ ಬರೋಣ. ಯಾವ ಜೀವರಾಶಿಯಾದರೂ ಇಲ್ಲವೇ ಯಾವ ಮನುಷ್ಯನಾದರೂ ಒಂದೇ ಬಾರಿ ಜನ್ಮ ಹೊಂದುತ್ತಾನೆ. ಈ ವಿಷಯವನ್ನು **"ಪುನರ್ಜನ್ಮ ರಹಸ್ಯ"** ಎನ್ನುವ ಗ್ರಂಥದಲ್ಲಿ ಹೇಳಿದ್ದೇವೆ. ಪ್ರತಿ ಮನುಷ್ಯನ ಜನ್ಮ ಸೃಷ್ಠಿಯ ಆದಿಯಲ್ಲಿಯೇ ನಡೆದಿದೆ. ಸೃಷ್ಠಿ ಆದಿಯಲ್ಲಿಯೇ ಒಂದು ಬಾರಿ ಜನ್ಮಿಸಿದ ನಂತರ ಮತ್ತೆ ಯಾವನೂ ಜನ್ಮಿಸುವುದಿಲ್ಲ. ಆದರೆ ಶರೀರ ಮಾರ್ಪಾಟಿಗಾಗಿ ಪುನರ್ಜನ್ಮವನ್ನು ಪ್ರತಿ ಮನುಷ್ಯ ಕೆಲವು ವರ್ಷಗಳಿಗೊಂದು ಬಾರಿ ಹೊಂದುತ್ತಿದ್ದಾನೆ. ಅದರ ಪ್ರಕಾರ ಈಗ ನಾವು ಪುನರ್ಜನ್ಮ ಎತ್ತಿದ್ದೇವೆ ಎಂದು ಹೇಳಬಹುದು. ನಮ್ಮ ಜನ್ಮ ಸೃಷ್ಠಿಯ

ಆದಿಯಲ್ಲಿಯೇ ನಡೆದಿದೆ. ಸೃಷ್ಠಿಯ ಆದಿಯಲ್ಲಿ ನೀನು ಹುಟ್ಟಿದಂತೆ ಜ್ಞಾಪಕವಿಲ್ಲ. ಆದ್ದರಿಂದ ನಿಜವಾದ ಜನ್ಮವನ್ನು ಮರೆತುಹೋಗಿದ್ದೇವೆ. ಪುನರ್ಜನ್ಮಕ್ಕೆ ಕಾಣಿಸುವ ತಾಯಿ ತಂದೆಯರು ಅಗತ್ಯ. ಆದರೆ ಜನ್ಮವನ್ನು ಹೊಂದಿದಾಗ ಅಂದರೆ ಸೃಷ್ಠಿ ಆದಿಯಲ್ಲಿ ಕಾಣಿಸುವ ತಾಯಿತಂದೆಯರಿಲ್ಲ. ನೀನಾಗಲಿ ಈಗ ನಿನಗೆ ತಾಯಿತಂದೆಯರಾಗಿ ಇರುವವರಾಗಲಿ ಎಲ್ಲರೂ ಸೃಷ್ಠ್ಯಾದಿಯಲ್ಲಿ ದೇವರಿಂದ ಸೃಷ್ಠಿಸಲ್ಪಟ್ಟಿದ್ದಾರೆ. ಸೃಷ್ಠಿ ಆದಿಯಲ್ಲಿ ಪ್ರಕೃತಿಯನ್ನೇ ಗರ್ಭವಾಗಿ ಮಾಡಿಕೊಂಡ ಪರಮಾತ್ಮ ಮನುಷ್ಯನನ್ನು ತಯಾರು ಮಾಡುವುದಕ್ಕೆ ತಾಯಿ ಅಂಡಾಣುವಿನಿಂದ, ತಂದೆಯ ವೀರ್ಯದಿಂದ ಕೆಲಸವಿಲ್ಲದೆ ಹುಟ್ಟಿಸಿದ್ದಾನೆ. ದೇವರು ಮೊದಲು ಸೃಷ್ಠಿ ಇಲ್ಲದಿರುವಾಗ ತನ್ನ ಸೃಷ್ಠಿಯನ್ನು ರಚಿಸಿದ್ದಾನೆ. ಹಾಗೆ ಒಬ್ಬ ಲೇಖಕ ತನ್ನ ಸೃಷ್ಠಿ ಹೇಗಿರಬೇಕೋ ಮೊದಲೇ ನಿರ್ಣಯಿಸಿಕೊಂಡು, ಹಾಗೆ ಒಬ್ಬ ಲೇಖಕ ಗ್ರಂಥವನ್ನು ಬರೆದಂತೆ ದೇವರು ತನ್ನ ಸೃಷ್ಠಿಯನ್ನು ಮಾಡಿದ್ದಾನೆ. (ತಯಾರು ಮಾಡಿದ್ದಾನೆ). ಮೊದಲ ಪುಸ್ತಕ ತಯಾರಾಗುವುದಕ್ಕೆ ಪ್ರಿಂಟಿಂಗ್ ಪ್ರೆಸ್ ಅಗತ್ಯವಿಲ್ಲದ ಹಾಗೆ, ಮೊದಲು ಮಾನವರನ್ನು ಸೃಷ್ಠಿಸುವುದಕ್ಕೆ ಮಾನವ ಸಂಬಂಧ ಅಂಡಾಣು, ಕಣ ಅಗತ್ಯವಿಲ್ಲ. ಮೊದಲು ಬರೆಯಲಾದ ಪುಸ್ತಕದ ಮಾದಿರಿಯನ್ನು (ಪ್ಲೇಟನ್ನು) ಅನುಸರಿಸಿ ಎಷ್ಟು ಪುಸ್ತಕಗಳನ್ನಾದರೂ, ಎಷ್ಟು ಬಾರಿಯಾದರೂ ತಯಾರು ಮಾಡಬಹುದು. ಹಾಗೆ ದೇವರು ಸ್ವಂತ ತಯಾರು ಮಾಡಿದ ಮಾನವನ ಮಾದರಿಯನ್ನು ಅನುಸರಿಸಿ ತಾಯಿ, ತಂದೆ ಎನ್ನುವ ಸಂಯುಕ್ತ ಯಂತ್ರಗಳಿಂದ ಬಹಳ ಜನ ಮಾನವರನ್ನು ಅನೇಕ ಬಾರಿ ಹುಟ್ಟಿಸುತ್ತಿದ್ದಾನೆ. **ಸೃಷ್ಠ್ಯಾದಿಯಲ್ಲಿ ಪ್ರಕೃತಿ ಪುರುಷರಿಂದ ಸೃಷ್ಠಿಸಲ್ಪಟ್ಟ ಮನುಷ್ಯನದ್ದು ಜನ್ಮವಾದರೆ, ನಂತರ ಪ್ರಕೃತಿ ಪುರುಷರ ಸ್ಥಾನದಲ್ಲಿ ಸ್ತ್ರೀ ಪುರುಷ ತಾಯಿ ತಂದೆಯಾಗಿದ್ದರೆ ಹೊಸ ಶರೀರಗಳೊಂದಿಗೆ ಹುಟ್ಟುವುದು ಪುನರ್ಜನ್ಮ ಆಗುತ್ತದೆ.** ಇಂತಹ ಪುನರ್ಜನ್ಮಗಳು ಶರೀರ ಬದಲಾವಣೆಗಾಗಿ ಬಹಳ ನಡೆಯುತ್ತಿವೆ. ಪುನರ್ಜನ್ಮಗಳು ಎಷ್ಟು ನಡೆದರೂ ಆ ಸಮಯದಲ್ಲಿ ಹೊಸ ಶರೀರಗಳಲ್ಲಿ ಜೀವಾತ್ಮನು ಸೇರುತ್ತಿದ್ದಾನೆ. ಆದರೆ ಜೀವಾತ್ಮನು ಮಾತ್ರ ಸೃಷ್ಠಿಯ ಆದಿಯಿಂದ ಒಂದೇ ತರಹ ಇದ್ದಾನೆ. ಒಂದು ಹೆಸರಿರುವ ಪುಸ್ತಕ ಎಷ್ಟು ಬಾರಿ ಹೊಸದಾಗಿ

ತಯಾರಾದರೂ ಅದಕ್ಕೆ ಹೆಸರು ಬದಲಾಗುವುದಿಲ್ಲ, ಅದರೊಳಗಿನ ವಿಷಯಗಳು ಬದಲಾಗುವುದಿಲ್ಲ. ಆದರೆ ಕಾಗದ ಮಾತ್ರ ಬದಲಾಗಿರುತ್ತದೆ. ಹಳೆಯ ಕಾಗದಗಳ ಸ್ಥಾನದಲ್ಲಿ ಹೊಸ ಕಾಗದಗಳಿರುತ್ತವೆ. ಹಾಗೆ ಮನುಷ್ಯ ಎಷ್ಟು ಬಾರಿ ಹುಟ್ಟಿದರೂ, ಆ ಮನುಷ್ಯನ ಶರೀರ ಹೊಸದಾಗುತ್ತದೆ. ಆದರೆ ಮನುಷ್ಯನಲ್ಲಿನ ಜೀವಾತ್ಮ ಸೃಷ್ಠಿ ಆದಿಯಿಂದ ಇರುವವನೇ ಇರುತ್ತಾನೆ. ಅವನಿಗಿರುವ ಗುಣಗಳೇ ಇರುತ್ತವೆ. ಪುಸ್ತಕ ಎಷ್ಟು ಬಾರಿ ಹೊಸದಾಗಿ ಅಚ್ಚು ಹಾಕಿದರೂ, ಅದರ ಲೇಖಕ ಮೊದಲು ಬರೆದವನೇ ಆದಂತೆ, ಮನುಷ್ಯ ಎಷ್ಟು ಬಾರಿ ಪುನರ್ಜನ್ಮ ಎತ್ತಿದರೂ, ಮೊದಲು ಸೃಷ್ಠಿಸಿದವನೇ ಅವನಿಗೆ ಸೃಷ್ಠಿಕರ್ತ ಆಗುತ್ತಾನೆ. ಪುಸ್ತಕ ಹುಟ್ಟಿ ಎಷ್ಟು ಕಾಲ ಕಳೆದರೂ ಅದರ ಲೇಖಕ ಬದಲಾಗದಂತೆ ಮನುಷ್ಯ ಎಷ್ಟು ಬಾರಿ ಶರೀರ ಬದಲಾಯಿಸಿ ಹುಟ್ಟಿದರೂ, ಸೃಷ್ಠಿ ನಡೆದು ಎಷ್ಟು ಕಾಲ ಕಳೆದರೂ, ಆತನನ್ನು ಮೊದಲು ಹುಟ್ಟಿಸಿದ ತಂದೆ ಮಾತ್ರ ಬದಲಾಗುವುದಿಲ್ಲ. ಆದ್ದರಿಂದ ಸೃಷ್ಠಿ ಆದಿಯಲ್ಲಿ ನಿನ್ನನ್ನು ಹುಟ್ಟಿಸಿದವನನ್ನೇ ನಿಜವಾದ ತಂದೆಯೆಂದು ಹೇಳಬೇಕಾಗುತ್ತದೆ.

ಪ್ರಸ್ತುತ ಕಾಲದಲ್ಲಿ ತಾಯಿ, ತಂದೆ ಕಾಣಿಸಿದರೂ ಇವರು ಜೆರಾಕ್ಸ್ ಮಿಷನ್ (ನೆರಳಚ್ಚುಯಂತ್ರ) ನಂತವರೇ ಎಂದು, ಸೃಷ್ಠಿಕರ್ತರು ಅಲ್ಲವೆಂದು ತಿಳಿಯಬೇಕು. ಒಂದು ಪುಸ್ತಕ ಹಳೆಯದಾದಾಗ ಜೆರಾಕ್ಸ್ ಮಿಷನ್‌ನಲ್ಲಿ ಜೆರಾಕ್ಸ್ ಮಾಡಿಸಿದರೆ ಆ ಮಿಷನ್ ಅದನ್ನು ಸೃಷ್ಠಿಸಲಿಲ್ಲ ತಾನೆ! ಇರುವ ಪುಸ್ತಕದಲ್ಲಿನ ವಿಷಯವನ್ನೇ ಇಲ್ಲವೇ ಬರವಣಿಗೆಯನ್ನೇ ಹೊಸ ಕಾಗದದ ಮೇಲೆ ಮುದ್ರಿಸಿ ಕಳಿಸಿರುವುದು ತಾನೆ! ಹಾಗೆ ಒಂದು ಶರೀರ ಹಳೆಯದಾದಾಗ ತಾಯಿ, ತಂದೆಯೆನ್ನುವ ಯಂತ್ರಗಳಂತಹ ಅವರಿಂದ ಮತ್ತೆ ಹುಟ್ಟಿದರೆ ಗತದಲ್ಲಿನ ಜೀವಾತ್ಮನೇ ಹೊಸ ಶರೀರದೊಂದಿಗೆ ಹುಟ್ಟುತ್ತಿದ್ದಾನೆ ಹೊರತು, ಪ್ರಸ್ತುತ ಕಾಣಿಸುವ ತಾಯಿ ತಂದೆಯರು ಮಾತ್ರ ಆತನನ್ನು ಸೃಷ್ಠಿಸಲಿಲ್ಲ. ಪುಸ್ತಕವನ್ನು ಜೆರಾಕ್ಸ್ ಮಾಡಿದಾಗ ಲೇಖಕನ ಹೆಸರಿನ ಸ್ಥಾನದಲ್ಲಿ ಜೆರಾಕ್ಸ್ ಮಿಷನ್ ಹೆಸರನ್ನು ಹೇಳದೆ ಮೊದಲು ರಚಿಸಿದವನ ಹೆಸರೇ ಹೇಳಿದಂತೆ, ಮನುಷ್ಯ ಕಾಣಿಸುವ

ತಾಯಿತಂದೆಯರಿಗೆ ಹುಟ್ಟಿದರೂ ಅದು ಜನ್ಮವಲ್ಲ ಪುನರ್ಜನ್ಮವೇ. ಆದ್ದರಿಂದ ಮೊದಲು ಜನ್ಮ ಕೊಟ್ಟ ದೇವರ ಹೆಸರೇ ತಂದೆ ಸ್ಥಾನದಲ್ಲಿ ಹೇಳಬೇಕಾಗಿ ಬಂದಿದೆ. ಈ ವಿಧವಾಗಿ ಸೃಷ್ಠಿ ಆದಿಯಲ್ಲಿ ಎಲ್ಲರಿಗೂ ಜನ್ಮ ಕೊಟ್ಟ ಬೀಜದಾತ ನಾದ ದೇವರೇ ತಂದೆಯಾಗುತ್ತಾನೆ. ಆದ್ದರಿಂದ ಬೈಬಲ್‌ನಲ್ಲಿ ಮತ್ತಯಿ ಸುವಾರ್ತೆ 23ನೇ ಅಧ್ಯಾಯದಲ್ಲಿ 9ನೇ ವಾಕ್ಯದಲ್ಲಿ "ತಂದೆ ಎಂದು ಹೆಸರಿಟ್ಟು ಯಾರನ್ನೂ ಕರೆಯಬೇಡ. ಒಬ್ಬನೇ ನಿಮ್ಮ ತಂದೆ. ಆತನು ಪರಲೋಕದಲ್ಲಿದ್ದಾನೆ" ಎಂದು ಹೇಳುವುದು ಪೂರ್ತಿ ಸತ್ಯವಾದ ಮಾತು. ಹಾಗೆ ಭಗವದ್ಗೀತೆ ಗುಣತ್ರಯ ವಿಭಾಗಯೋಗ ಎನ್ನುವ ಅಧ್ಯಾಯದಲ್ಲಿ 3, 4 ಶ್ಲೋಕಗಳಲ್ಲಿ ಸರ್ವ ಜೀವಿಗಳಿಗೂ ಬೀಜದಾತನಾದ ನಾನು ತಂದೆಯೆಂದು ಹೇಳುವುದು ಸಹ ಪೂರ್ತಿ ಸತ್ಯವಾದದ್ದು. ತಂದೆ ಪರಮಾತ್ಮ, ತಾಯಿ ಪ್ರಕೃತಿ ಎಂದು ತಿಳಿದುಹೋಗಿದೆ. ಸೃಷ್ಠಿ ಆದಿಯಲ್ಲಿ ಹುಟ್ಟಿಸಿದ ಪ್ರಕೃತಿ ಪರಮಾತ್ಮನೇ ನಿಜವಾದ ತಾಯಿ ತಂದೆಯರು. ನಂತರ ಪುನರ್ಜನ್ಮದಲ್ಲಿ ಕಾಣಿಸುವ ತಾಯಿತಂದೆಯರು ಆ ಜನ್ಮಕ್ಕೆ ತಾಯಿತಂದೆ ಯರಾದರೂ ಅವರು ಅಚ್ಚು ಯಂತ್ರದವರಂತೆಯೇ ಹೊರತು  ನಿಜವಾದ ಸೃಷ್ಠಿ ಅವರಿಂದ ನಡೆಯಲಿಲ್ಲ. ಆದ್ದರಿಂದ ಬೈಬಲ್‌ನಲ್ಲಿ ತಂದೆ ಎಂದು ಹೆಸರಿಟ್ಟು ಯಾರನ್ನೂ ಕರೆಯಬೇಡವೆಂದು ಹೇಳುವುದು ಅತಿಶಯೋಕ್ತಿ ಅಲ್ಲ.

ಮನುಷ್ಯನಿಗೆ ಜನ್ಮ ಒಂದೇ ಬಾರಿ, ಆದರೆ ಪುನರ್ಜನ್ಮಗಳೆಷ್ಟೋ ಹೇಳಲಾಗುವುದಿಲ್ಲ. ಮನುಷ್ಯನಿಗೆ ತಂದೆ ಒಬ್ಬನೇ, ಆದರೆ ತಂದೆಯಂತಹವರು ಎಷ್ಟೋ ಜನ ಹೇಳಲಾಗುವುದಿಲ್ಲ. ಸೃಷ್ಠಿಯ ಆದಿಯಲ್ಲಿ ಜನ್ಮಿಸಿದ ಮನುಷ್ಯ ಸೃಷ್ಠಿಯ ಅಂತ್ಯದವರೆಗೂ ಇರಬೇಕಾದದ್ದೇ, ಮಧ್ಯದಲ್ಲಿ ಬರುವವು ಶರೀರ ಮರಣಗಳೇ ಆಗಲಿ ಜೀವಾತ್ಮನ ನಾಶನಗಳಲ್ಲ. ಜೀವಾತ್ಮನ ನಾಶ ಮೋಕ್ಷ ದೊಂದಿಗೆ ಬರುವುದು. ಜೀವಾತ್ಮ ಮೋಕ್ಷ ಹೊಂದುವವರೆಗೂ ಜನ್ಮಗಳಲ್ಲದಂತಹ ಪುನರ್ಜನ್ಮಗಳು ಹೊಂದಬೇಕಾದ್ದೇ. ಹಾಗೇ ತಾಯಿತಂದೆ ಅಲ್ಲದಂತಹ ತಾಯಿತಂದೆಯರಂತಹ ಅವರನ್ನು ನೋಡಬೇಕಾದದ್ದೇ. ಮನುಷ್ಯ ಹುಟ್ಟಿ ಎಷ್ಟು ಲಕ್ಷ, ಎಷ್ಟು ಕೋಟಿ ವರ್ಷಗಳಾಗಿವೆಯೋ ಹೇಳಲಾಗುವುದಿಲ್ಲ. ಆದರೆ

ಇಲ್ಲಿಯವರೆಗೂ ಮನುಷ್ಯನಿಗೆ ತನ್ನ ತಾಯಿ ತಂದೆಯರ್‍ಯಾರೋ ತಿಳಿದಿಲ್ಲವೆಂದರೆ ನಾಚಿಕೆಗೇಡಲ್ಲವೆ! ತನಗೆ ನಿಜವಾದ ತಾಯಿತಂದೆಯರು ಇದ್ದಾರೆನ್ನುವ ವಿಷಯವೂ ತಿಳಿದಿಲ್ಲವೆಂದರೆ ಆಶ್ಚರ್ಯವಲ್ಲವೆ! ಹೊರಗಿನ ಪ್ರಪಂಚದಲ್ಲಿ ಬಹಳ ಮೇಧಾವಿಯಾಗಿ, ಬಹಳ ದೊಡ್ಡ ಹುದ್ದೆಯಲ್ಲಿದ್ದರೂ ಬಹಳ ವಿಜ್ಞಾನಿಯಾಗಿ, ಬಹಳ ಬಲವಂತನಾಗಿ ಪ್ರವರ್ತಿಸುವ ಮನುಷ್ಯನಿಗೆ ತನ್ನ ಸ್ವಂತ ತಾಯಿತಂದೆಯರ ಮೇಲೆ ಜ್ಞಾನ ಇಲ್ಲವೆಂದರೆ, ಅವನು ಸತ್ತರೂ ಒಂದೇ ಬದುಕಿದರೂ ಒಂದೇಯೆಂದು ವೇಮನ ಯೋಗಿ **"ತಾಯಿ ತಂದೆಯರ ಮೇಲೆ ದಯೆಯಿಲ್ಲದ ಪುತ್ರನು ಹುಟ್ಟಿದರೇನು ಸತ್ತರೇನು, ಹುತ್ತದೊಳಗಿನ ಗೆದ್ದಲು ಹುಟ್ಟುತ್ತಾ ಗಿಟ್ಟುತ್ತಾ"** ಎಂದು ಹೇಳಿದ್ದಾನೆ. ವೇಮನ ಹೇಳಿದಂತೆ ಪ್ರಕೃತಿ ಪುರುಷರು ಇದ್ದಾರೆಂದು, ಅವರು ತನ್ನ ತಾಯಿ ತಂದೆಯರೆಂದು ತಿಳಿಯದವರು ಹುತ್ತದೊಳಗಿನ ಗೆದ್ದಲಿಗೆ ಸಮಾನ. ಅವು ಹುಟ್ಟಿದರೂ ಸತ್ತರೂ ಅವುಗಳನ್ನು ಕುರಿತು ಯಾರೂ ಏನೂ ಅಂದುಕೊಳ್ಳುವುದಿಲ್ಲ. ಅಂತವನು ಹುಟ್ಟಿದರೂ ಒಂದೇ, ಹುಟ್ಟದಿದ್ದರೂ ಒಂದೇ ಎಂದು ವೇಮನನ ಭಾವನೆ.

ಸೃಷ್ಠಿ ಆದಿಯಲ್ಲಿ ಪರಮಾತ್ಮ ತನ್ನ ಪ್ರಕೃತಿಯಿಂದ ಶರೀರವನ್ನು ತಯಾರು ಮಾಡಿಸಿ, ಐದು ಧಾತುಗಳಿಂದ ಕೂಡಿದ ಶರೀರದಲ್ಲಿ ತನ್ನ ಅಂಶವಾದ ಜೀವಾತ್ಮವನ್ನು ಸೇರಿಸಿ, ಸಜೀವ ಶರೀರಗಳನ್ನು ತಯಾರು ಮಾಡಿದ್ದಾನೆ. ಹಾಗೆ ಮೊದಲು ತಯಾರು ಮಾಡಿದ ಜೀವರಾಶಿಗಳವು ಜನ್ಮಗಳೆಂದು ತಿಳಿದುಕೊಂಡಿದ್ದೇವೆ. ಆಗ ಪ್ರಾರಂಭವಾದ ಜನ್ಮ ಇಲ್ಲಿಯವರೆಗೂ ಇದೆ. ನಂತರವೂ ಇರುತ್ತದೆ. ಮನುಷ್ಯ ಸೃಷ್ಠಿ ಆದಿಯಲ್ಲಿ ಜನ್ಮ ತೆಗೆದುಕೊಂಡಾಗ ಸಮಾಧಿಯಿಂದ ಏಳಲ್ಪಟ್ಟಿಲ್ಲ. ಪುನರ್ಜನ್ಮಗಳಲ್ಲಿ ಮಾತ್ರವೇ ಸಮಾಧಿ ಎನ್ನುವ ಶರೀರದಿಂದ ಏಳಲ್ಪಡುತ್ತಾನೆ. ಪುನರ್ಜನ್ಮದಲ್ಲಿ ತಾಯಿಗರ್ಭದಿಂದ ಹೊರಬಿದ್ದ ಶಿಶು ಶರೀರದೊಳಗೆ, ಗತ ಜನ್ಮದೊಳಗಿನ ಶರೀರದಿಂದ ಹೊರಬಿದ್ದ ಜೀವಾತ್ಮನು ಸೇರಿದಾಗ ಸಮಾಧಿ ಆಗುತ್ತದೆ. ಸೃಷ್ಠಿ ಆದಿಯಲ್ಲಿ ತಾಯಿಗರ್ಭದಿಂದ ಶರೀರ

ಹೊರಬೀಳುವುದಿಲ್ಲ. ಜೀವಾತ್ಮ ಬೇರೆ ಶರೀರದಿಂದ ಬರಲೂ ಇಲ್ಲ. ಆದ್ದರಿಂದ ಸೃಷ್ಠಿ ಮೊದಲಿನಲ್ಲಿ ಜನ್ಮಿಸಿದಾಗ ಯಾರಿಗೂ ಸಮಾಧಿ ಇಲ್ಲ. **ಸಮಾಧಿ ಎನ್ನುವುದು ಪುನರ್ಜನ್ಮಗಳು ಇರುವವರಿಗೆ ಮಾತ್ರವೇ ಇದೆಯೆಂದು ತಿಳಿಯಬೇಕು.** ಪುನರ್ಜನ್ಮದಲ್ಲಿ ಮಾತ್ರವೇ ಮನುಷ್ಯ (ಜೀವಾತ್ಮ) ಸಮಾಧಿಯಿಂದ ಏಳಲ್ಪಡುತ್ತಾನೆ ಎಂದು ಮೂಲಗ್ರಂಥಗಳಲ್ಲಿ ಇರುವ ಮಾತು ವಾಸ್ತವವಾಗುತ್ತದೆ. ಮೂಲ ಗ್ರಂಥಗಳಲ್ಲಿ ದೇವರು ಸಮಾಧಿಯಿಂದ ಏಳಿಸುತ್ತಾನೆಂದು ಬರೆಯಲಾಗಿದೆ. ಇಲ್ಲಿ ಈ ಮಾತಿನಲ್ಲಿ ಮನುಷ್ಯನಿಗೆ ಸ್ವಲ್ಪ ಸಂದಿಗ್ಧತೆ ಏರ್ಪಡಬಹುದು. ಅದು ಪ್ರಶ್ನೆರೂಪ ಆಗಬಹುದು. ದೇವರು ರೂಪ, ನಾಮ, ಕ್ರಿಯೆಗಳು ಇಲ್ಲದವನೆಂದು ನೀವೆ ಹೇಳಿದ್ದೀರಲ್ಲವೇ! ಹಾಗಿರುವಾಗ ದೇವರು ಮನುಷ್ಯನನ್ನು ಸಮಾಧಿಯಿಂದ ಏಳಿಸುವ ಕೆಲಸ ಮಾಡುವನೇ ಎಂದು ಪ್ರಶ್ನಿಸಬಹುದು. ಅದಕ್ಕೆ ಉತ್ತರ ಏನೆಂದರೆ! ದೇವರು ಸೃಷ್ಠಿ ಪೂರ್ವದಲ್ಲಿ ಕೆಲಸ ಮಾಡಿ ಮಾನವನನ್ನು ಹುಟ್ಟಿಸಿರಬಹುದು. ಆದರೆ ಸೃಷ್ಠಿಯ ನಂತರ ಅವನಿಗೆ ಕೆಲಸವಿಲ್ಲ, ರೂಪವಿಲ್ಲ, ಹೆಸರೂ ಇಲ್ಲ. ಆದರೆ ಅವನು ಏರ್ಪಡಿಸಿದ ವಿಧಾನವನ್ನು ಅನುಸರಿಸಿ, ಅವನು ನಿಯಮಿಸಿದವರು, ಅವನ ಕೆಲಸವನ್ನು ಮಾಡುವುದರಿಂದ, ಆ ಕೆಲಸವನ್ನು ಅವನು ಮಾಡಿದ ಹಾಗೆ ಹೇಳುತ್ತಿದ್ದಾರೆ. ಆದರೆ ಅವನು ನಿಯಮಿಸಿದ ಭೂತಗಳು, ಮಹಾಭೂತಗಳು, ಗ್ರಹಗಳು, ಉಪಗ್ರಹಗಳು ಎನ್ನುವವು ಎಷ್ಟೋ ದೇವರ ಕೆಲಸವನ್ನು ನೆರವೇರಿಸುತ್ತಿವೆ. ದೇವರು ಯಾವ ಕೆಲಸವನ್ನೂ ಸ್ವತಃ ಮಾಡಲಿಲ್ಲ.

ಪುನರ್ಜನ್ಮದಲ್ಲಿ ಹೊಸದಾಗಿ ಹುಟ್ಟಿದ ಶಿಶುಶರೀರದವರೆಗೆ ಜೀವಾತ್ಮನನ್ನು ತೆಗೆದುಕೊಂಡು ಬಂದು ಅದರಲ್ಲಿ ಸೇರಿಸಿ, ಮತ್ತೆ ಅದರಿಂದ ಏಳಿಸುವುದು ದೇವರ ಕೆಲಸವೆಂದು ಹೇಳಿದರೂ, ಆ ಕೆಲಸ ನಡೆಯುವುದಕ್ಕೆ ಮೂಲಕಾರಕನು ದೇವರೇ ಆದರೂ, ಆ ಕೆಲಸವನ್ನೆಲ್ಲಾ ದೇವರು ಮಾಡುವುದಿಲ್ಲ. ಆ ಕೆಲಸವನ್ನು ಮಾಡುವುದಕ್ಕೆ ಮತ್ತು ಜೀವಾತ್ಮನನ್ನು ಜೀವನಾಂತ್ಯದವರೆಗೆ

ನಡೆಸುವುದಕ್ಕೂ, ಕರ್ಮಗಳನ್ನು ಅನುಭವಿಸುವಂತೆ ಮಾಡುವುದಕ್ಕೂ ತಕ್ಕಂತೆ ಶರೀರದಲ್ಲಿ ತನ್ನ ಕೆಲಸ ಮಾಡುವಂತೆ ದೇವರು, ಆತ್ಮ ಎನ್ನುವುದನ್ನು ತನ್ನ ಅಂಶದಿಂದ ಏರ್ಪಡಿಸಿಟ್ಟಿದ್ದಾನೆ. ಪರಮಾತ್ಮ (ದೇವರು) ಏರ್ಪಡಿಸಿದ ಆತ್ಮ ತನ್ನ ಪಾತ್ರವನ್ನು ಸೃಷ್ಠಿಯ ಆದಿಯಿಂದ ಜೀವಾತ್ಮನೊಂದಿಗೆ ಶರೀರದಲ್ಲಿ ಇದ್ದು ನೆರವೇರಿಸುತ್ತಿದೆ. ಈ ಆತ್ಮವನ್ನು ಯಾರು ತಿಳಿದುಕೊಳ್ಳುತ್ತಾರೋ, ನಂತರ ಅವರು ಪರಮಾತ್ಮನನ್ನು ಸುಲಭವಾಗಿ ತಿಳಿಯುವುದಕ್ಕೆ ಅವಕಾಶವಿದೆ. ಸೃಷ್ಠಾದಿಯಲ್ಲಿಯೇ ತನ್ನ ಪರಿಪಾಲನೆಗಾಗಿ ದೇವರು ಹಲವರನ್ನು ತನ್ನ ಸೇವಕರನ್ನು ಏರ್ಪಡಿಸಿದರೂ ಅವರು ಯಾರೋ ನಮಗೆ ತಿಳಿಯದು. ದೇವರು ಏರ್ಪಡಿಸಿದ ಕೆಲಸಗಳನ್ನು ಮಾಡುವುದಕ್ಕೆ, ಪ್ರಕೃತಿಸಂಬಂಧವಾದ ಭೂತಗಳನ್ನು, ಗ್ರಹಗಳನ್ನು ದೇವರು ಮನುಷ್ಯನ ಜೊತೆಗೆ ಸೃಷ್ಠಿಸಿದರೂ, ಎಲ್ಲದಕ್ಕಿಂತ ದೊಡ್ಡದು ಅತ್ಯಂತ ಶಕ್ತಿವಂತವಾದ ಆತ್ಮವನ್ನು ಸಹ ಮನುಷ್ಯನ ಜೊತೆಗೆ ಸೃಷ್ಠಿಯ ಆದಿಯಲ್ಲಿಯೇ ದೇವರು ಸೃಷ್ಠಿಸಿದ್ದಾನೆ. ಶರೀರಕ್ಕೆ ಅಧಿಪತಿಯಾಗಿ ಆತ್ಮವನ್ನು ನಿಯಮಿಸಿ ಜೀವಾತ್ಮನನ್ನು ಕರ್ಮ ಅನುಭವಿಸುವಂತೆ ಮಾಡಿದ್ದಾನೆ. **ಸೃಷ್ಠಿಯಲ್ಲಿ ಆತ್ಮದ ಪಾತ್ರ ಬಹಳ ದೊಡ್ಡದು. ಪರಮಾತ್ಮನ ನಂತರ ಆತ್ಮವೇ ದೊಡ್ಡದೆಂದು ಹೇಳಬಹುದು.** ದೇವರು ಪ್ರಕೃತಿಯನ್ನು ತನ್ನ ಜೊತೆಗಾಗಿ ಸೃಷ್ಠಿಸಿದ ನಂತರ ಪ್ರಕೃತಿಯನ್ನು ಐದು ಭಾಗಗಳಾಗಿ ಮಾಡಿದ್ದಾನೆ. ಹಾಗೆ ಪರಮಾತ್ಮನಾದ ತನ್ನನ್ನು ಮೂರು ಭಾಗಗಳಾಗಿ ವಿಭಜಿಸಿದ್ದಾನೆ. ಪ್ರಕೃತಿ ಪ್ರಕೃತಿಯಾಗಿಯೇ ಇದ್ದು ಅದರಿಂದ ಐದು ಭಾಗಗಳನ್ನು ಹೊರಗೆ ಬರುವಂತೆ ಮಾಡಿದ್ದಾನೆ. ಹಾಗೆ ಪರಮಾತ್ಮ ಪರಮಾತ್ಮನಾಗಿಯೇ ಇದ್ದು ತನ್ನಿಂದ ಎರಡು ಭಾಗಗಳನ್ನು ಹೊರಗಡೆ ಬರುವಂತೆ ಮಾಡಿದ್ದಾನೆ. ಪ್ರಕೃತಿಯಿಂದ ಬಂದಿರುವ ಐದು ಭಾಗಗಳು ಶರೀರವಾದರೆ, ಪರಮಾತ್ಮನಿಂದ ಹೊರಗಡೆ ಬಂದಿರುವ ಆತ್ಮ, ಜೀವಾತ್ಮ ಎನ್ನುವ ಎರಡೂ ಶರೀರದಲ್ಲಿ ಸೇರಿಹೋಗಿವೆ. ಇದನ್ನು ಅನುಸರಿಸಿ ನೋಡಿದರೆ ಒಂದು ಸಜೀವ ಶರೀರದಲ್ಲಿ ಪ್ರಕೃತಿಯ ಐದು ಭಾಗಗಳು ಮತ್ತು ಪರಮಾತ್ಮನ ಎರಡು ಭಾಗಗಳು ಇವೆಯೆಂದು ತಿಳಿಯುತ್ತಿದೆ.

ಇದು ಶಾಸ್ತ್ರಬದ್ಧವಾದ ವಿಷಯ. ಆದ್ದರಿಂದ ಈ ವಿಷಯಗಳು ಪೂರ್ತಿ ಸತ್ಯವಾದವುಗಳು. ಈ ಮಾತನ್ನು ನಾವು ಹೇಳಿದರೂ ನಮ್ಮ ಬೆಲೆಯನ್ನು ತಿಳಿಯದಿರುವವರು ನಂಬದೆ ಹೋಗಬಹುದು. ಶಾಸ್ತ್ರಬದ್ಧವಾದಾಗ ಹೊರಗಡೆ ನಿರೂಪಣೆಗೆ ಬರಬೇಕಲ್ಲವೆ ಎಂದು ಕೇಳಬಹುದು. ಇಂತಹ ಪ್ರಶ್ನೆ ಕೆಲವರಿಗೆ ಬರಬಹುದೆಂದು ಪರಮಾತ್ಮ ಮೊದಲೇ ಈ ಜ್ಞಾನ ನಿರೂಪಣೆಯಾಗಿ ತಿಳಿಯುವಂತೆ ನಮ್ಮ ಶರೀರದ ಮೇಲೆ ಒಂದು ವಿಧವಾದ ಗುರುತನ್ನು ಇಟ್ಟಿದ್ದಾನೆ. ಶರೀರದ ಮೇಲೆ ಸೃಷ್ಠಿಯ ಆದಿಯಲ್ಲಿಯೇ ದೇವರು ಇಟ್ಟ ಗುರುತು ಪ್ರಪಂಚ ವಿಧಾನದಲ್ಲಿ ಯಾವ ಅರ್ಥ ಇಲ್ಲವಾದರೂ, ಪರಮಾತ್ಮ ವಿಧಾನದಲ್ಲಿ ವಿಶೇಷವಾದ ಅರ್ಥ ಇರುವಂತದ್ದಾಗಿದೆ. ಆ ಗುರುತಿನ ವಿವರವನ್ನು ತಿಳಿದುಕೊಳ್ಳುವ ಮೊದಲು ಸ್ವಲ್ಪ ವಿಷಯವನ್ನು ತಿಳಿದುಕೊಳ್ಳೋಣ. ಸೃಷ್ಠಿ ಮೊದಲಿಗೇ ಪ್ರಕೃತಿ ಸಂಬಂಧವಾದ ಶರೀರದಲ್ಲಿ ಪರಮಾತ್ಮ ಸಂಬಂಧವಾದ ಜೀವಾತ್ಮ ಆತ್ಮಗಳನ್ನು ದೇವರು ಅಳವಡಿಸಿರುವುದು ನಡೆದಿದೆ. ಸೃಷ್ಠಿಗಿಂತ ಮೊದಲು ಕೇವಲ ಪರಮಾತ್ಮ (ದೇವರು) ಮಾತ್ರ ಇರುತ್ತಿದ್ದನು. ಈ ದಿನ ಕಾಣಿಸುವ ಪ್ರಕೃತಿಯಾಗಲಿ, ಕಾಣಿಸದಿರುವ ಜೀವಾತ್ಮ, ಆತ್ಮಗಳಾಗಲಿ ಯಾವುವೂ ಇಲ್ಲ. ಪ್ರಕೃತಿಯೊಳಗಿರುವ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಯಾವುವೂ ಇಲ್ಲ. ಆಕಾಶ ಎಂದರೆ ಶೂನ್ಯವೂ ಸಹ ಇಲ್ಲದ ಸ್ಥಿತಿ ಹೇಗಿರುತ್ತದೋ ಯಾವ ರೀತಿಯೂ ಊಹಿಸಿಕೊಳ್ಳುವುದಕ್ಕೆ ಸಾಧ್ಯವಾಗುವುದಿಲ್ಲ. ಆ ಸ್ಥಿತಿ ದೇವರಿಗೇ ಅಲ್ಲದೆ ಯಾರಿಗೂ ತಿಳಿಯದು. ಅಂತಹ ಸ್ಥಿತಿಯಿಂದ ಅಚರ ಪ್ರಕೃತಿ ತಯಾರಾಗಿದೆ. ನಂತರ ಚರ ಪ್ರಕೃತಿ ತಯಾರಾಗಿದೆ. ತಕ್ಷಣವೇ ಜೀವಾತ್ಮ ಆತ್ಮಗಳು ತಯಾರಾಗಿವೆ. ಸೃಷ್ಠ್ಯಾದಿಯಲ್ಲಿ ಎರಡು ಪ್ರಕೃತಿಗಳು, ಎರಡು ಆತ್ಮಗಳು ತಯಾರಾಗುವುದಕ್ಕೆ ಕ್ಷಣಕಾಲವೇ ಇಡಿದಿದೆ. ಒಂದೇ ಕ್ಷಣದಲ್ಲಿ ದೈವ ಸಂಕಲ್ಪದಿಂದ ಪ್ರಕೃತಿ, ಪ್ರಕೃತಿ ಸಂಬಂಧವಾದ ಶರೀರಗಳು ತಯಾರಾ ದಾಗಲೇ ಪರಮಾತ್ಮ ಸಂಬಂಧವಾದ ಆತ್ಮ ಜೀವಾತ್ಮಗಳು ತಯಾರಾಗಿವೆ.

ಮೊದಲು ಪ್ರಕೃತಿ ಸಂಬಂಧವಾದವು ತಯಾರಾದರೆ ಆ ಕ್ಷಣವೇ ಪರಮಾತ್ಮ ಸಂಬಂಧವಾದವು ತಯಾರಾಗಿವೆ. ಇದು ಸೃಷ್ಠಿಯ ಆದಿಯಲ್ಲಿಯೇ

ನಡೆದ ಕೆಲಸವೆಂದು ತಿಳಿಯುವುದಕ್ಕೆ, ಆಗಲೇ ಮೊದಲು ಹುಟ್ಟಿದ ಶರೀರದ ಮೇಲೆ ಪ್ರಕೃತಿ, ಪರಮಾತ್ಮ ಸಂಬಂಧವಾದ ಅರ್ಥ ಕೊಡುವ ಗುರುತನ್ನು ದೇವರು ಮುದ್ರಿಸಿದ್ದಾನೆ. ಪ್ರಪಂಚದಲ್ಲಿ ಯಾವ ಅರ್ಥವೂ ಕೊಡದ ಆ ಮುದ್ರೆಗಳು, ದೈವಜ್ಞಾನದಲ್ಲಿ ಬಹಳ ಅರ್ಥ ಕೊಡುವಂತೆ ಇದ್ದರೂ ಅವುಗಳನ್ನು ಕುರಿತು ಯಾರೂ ಯೋಚಿಸಲೂ ಇಲ್ಲ. ಅವು ಯಾರಿಗೂ ತಿಳಿದುಬರಲೂ ಇಲ್ಲ. ಪ್ರಪಂಚದಲ್ಲಿ ಇಲ್ಲಿಯವರೆಗೆ ಯಾರಿಗೂ ತಿಳಿಯದ ಆ ಮುದ್ರೆಗಳು ಪ್ರತಿ ಶರೀರದ ಮೇಲೆ ಬಲ ಎಡ ಬದಿಗಳಲ್ಲಿ ಒಂದೊಂದು ಭಾಗದಲ್ಲಿ ಒಂದೊಂದು ಎಲ್ಲರಿಗೂ ಕಾಣಿಸುವಂತೆ ಇವೆ. ಆ ಗುರುತುಗಳು ಅಮೆರಿಕಾದಲ್ಲಿ ಬೆಳ್ಳಗೆ ಹುಟ್ಟಿದವನಿಗಾಗಲಿ, ಆಫ್ರಿಕಾದಲ್ಲಿ ಕಪ್ಪಾಗಿ ಹುಟ್ಟಿದವನಿಗಾಗಲಿ ಎಲ್ಲಿ ಹುಟ್ಟಿದರೂ ಎಲ್ಲರ ಶರೀರಗಳ ಮೇಲೆ ಮುದ್ರಿಸಿದಂತಿವೆ. ಚೆನ್ನಾಗಿ ಕಾಯಿಸಿಟ್ಟ ಕಬ್ಬಿಣದ ತುಂಡಿನಿಂದ ಸುಟ್ಟರೆ ಚರ್ಮ ಹೇಗೆ ಸುಟ್ಟುಹೋಗಿ ಸಾಧಾರಣ ಚರ್ಮಕ್ಕಿಂತ ಬೇರೆಯಾಗಿ ತಯಾರಾಗುತ್ತದೋ ಹಾಗೆ ಚರ್ಮದ ಮೇಲೆ ಸುಟ್ಟಂತೆ ಇರುವುದರಿಂದ ಅದನ್ನು ದೇವರು ಮುದ್ರಿಸಿದ ಮುದ್ರೆ ಎನ್ನುತ್ತಿದ್ದೇವೆ. ಈ ಮುದ್ರೆಯ ವಿಷಯವನ್ನು ಇಲ್ಲಿಯವರೆಗೆ ಯಾರೂ ಹೇಳಲಿಲ್ಲ, ಆದರೆ ನಾವು ನಿಮಗೆ ಹೇಳಿ, ಆಗ ಪ್ರವಕ್ತರು ಬಿಟ್ಟಿರುವುಗಳಲ್ಲಿ ಒಂದನ್ನು ಈ ಗ್ರಂಥದಲ್ಲಿ ಪೂರ್ತಿ ಮಾಡುತ್ತಿದ್ದೇವೆ. ದೇವರ ಸಮಸ್ತ ಜ್ಞಾನಗಳಲ್ಲಿ ಇದು ಹೊಸ ಜ್ಞಾನವೆಂದು ಗುರುತಿಸಬೇಕು. ಪ್ರಕೃತಿ ಪ್ರಕೃತಿಯಾಗಿಯೇ ಇದ್ದು ಚರಾಚರ ಎನ್ನುವ ಎರಡು ಭಾಗಗಳಾಗಿ ಸೀಳಿ ಹೋಗಿದೆಯೆಂದು ಹೇಳಿಕೊಂಡಿದ್ದೇವಲ್ಲವೆ! ಪ್ರಕೃತಿ ಎರಡು ಭಾಗಗಳಾಗಿರುವುದರಿಂದ ಪ್ರಕೃತಿಯಿಂದ ತಯಾರಾದ ಶರೀರ ಪ್ರತ್ಯಕ್ಷವಾಗಿ ಬಲ ಎಡ ಎನ್ನುವ ಎರಡು ಭಾಗಗಳಾಗಿ ತಯಾರಾಗಿದೆ. ಬಲ ಎಡ ಭಾಗಗಳಾಗಿ ಶರೀರ ತಯಾರಾಗಿ, ಪ್ರಕೃತಿ ಎರಡು ಭಾಗಗಳಾಗಿದೆಯೆಂದು ತಿಳಿಯುವಂತೆ ಮಾಡಿದೆ. ಪ್ರಕೃತಿ ಎರಡು ಭಾಗಗಳಾಗಿ ಇರುವುದರಿಂದ ಪ್ರಕೃತಿಯಿಂದ ತಯಾರಾದ ಗುಣಗಳು ಸಹ ಒಳ್ಳೆಯ ಕೆಟ್ಟ ಗುಣಗಳು ಎನ್ನುವ ಎರಡು ಭಾಗಗಳಾಗಿ ತಯಾರಾಗಿವೆ. ಗುಣಗಳು ಎರಡು ಭಾಗಗಳಾದರೆ ಅವುಗಳಿಂದ ಬರುವ ಕರ್ಮಗಳು ಪಾಪ, ಪುಣ್ಯ ಎನ್ನುವ ಎರಡು ವಿಧ ಕರ್ಮಗಳಾಗಿ

ತಯಾರಾಗಿವೆ. ಕರ್ಮಗಳು ಎರಡು ವಿಧಗಳಾದರೆ, ಅವುಗಳನ್ನು ಅನುಸರಿಸಿ ಮನುಷ್ಯ (ಜೀವಾತ್ಮ)ನ ಅನುಭವಗಳು ಸಹ ಸುಖ ದುಃಖ ಎನ್ನುವ ಎರಡು ಭಾಗಗಳಾಗಿ ಸೀಳಿ ಹೋಗಿವೆ. ಈ ವಿಧವಾಗಿ ಸ್ಥೂಲಶರೀರ, ಬಲ ಎಡ ಎನ್ನುವ ಎರಡು ಭಾಗಗಳು ಕಾಣಿಸುವಂತಿದೆ. ಈ ರೀತಿ ಬಲ ಎಡ ಕಾಣಿಸುವ ಶರೀರದ ಮೇಲೆ ವಿಶಾಲವಾಗಿ ಖಾಲಿಯಾಗಿರುವ ವಕ್ಷಸ್ಥಳದ ಮೇಲೆ ದೇವರು ಸುಟ್ಟಿರುವ ಮುದ್ರೆಗಳ ಹಾಗೆ ಎರಡು ಮುದ್ರೆಗಳನ್ನು ಇಟ್ಟಿದ್ದಾನೆ. ಅವುಗಳನ್ನೇ **ಎದೆ ಮೇಲೆ ಮುದ್ರೆ** ಎನ್ನುತ್ತಿದ್ದೇವೆ.

ಈ ಎದೆಯ ಮೇಲೆ ಮುದ್ರೆ ದೇವರು ಇಟ್ಟಿರುವುದು. ಆದ್ದರಿಂದ ಎಲ್ಲರ ಶರೀರಗಳ ಮೇಲೆ ಇದೆ. ಈ ದಿನ ನಾನು ಇಂತಹ ಮತದವನೆಂದು, ಇಂತಹ ದೇಶದವನೆಂದು, ಇಂತಹ ಕುಲದವನೆಂದು ಹೇಳಿಕೊಳ್ಳುವವರೆಲ್ಲರಿಗೂ ಒಂದೇ ರೀತಿಯ ಮುದ್ರೆ ಎಲ್ಲರ ಶರೀರಗಳ ಮೇಲೆ ಇದೆ. ಎದೆಯ ಮೇಲೆ ಮುದ್ರೆಯ ಆಕಾರವನ್ನು ಮುಂದಿನ ಪುಟದಲ್ಲಿ ನೋಡಬಹುದು. ಚರ್ಮ ಸುಟ್ಟ ಜಾಗದಲ್ಲಿ ಕೂದಲು ಬೆಳೆಯದ ಹಾಗೆ



**ಎದೆಯ ಮೇಲೆ ಮುದ್ರೆ (ಚಿತ್ರ)**

ಎದೆಯ ಮೇಲೆ ಇರುವ ಮುದ್ರೆಯಲ್ಲಿ ಚರ್ಮ ಸುಟ್ಟಂತಿದ್ದು, ಆ ಚರ್ಮದ ಮೇಲೆ ಕೂದಲುಗಳು ಸಹ ಬೆಳೆದಿರುವುದಿಲ್ಲ. ಅಂತಹ ದುಂಡಾದ ಚರ್ಮ

ಪ್ರತ್ಯೇಕವಾಗಿ ಕಾಣಿಸುತ್ತಾ ಚರ್ಮಕ್ಕೆ ಬೇರೆಯಾಗಿ ಕಾಣಿಸುತ್ತದೆ. ಹಾಗೆ ಬೇರೆಯಾಗಿ ಕಾಣಿಸುವ ದುಂಡಾದ ಚರ್ಮದ ಮೇಲೆ ಮಧ್ಯ ಭಾಗದಲ್ಲಿ ತೊಗರಿಕಾಳಿನ ಪರಿಮಾಣದಲ್ಲಿ ಎತ್ತರವಾಗಿ ಒಂದು ಗುರುತು ಕಾಣಿಸುತ್ತಿರುತ್ತದೆ. ಎದುರಿಗೆ ನೋಡುವವರಿಗೆ ಪಾಣಿಮಟ್ಟದಲ್ಲಿ ಶಿವಲಿಂಗವನ್ನು ಮೇಲಿಂದ ನೋಡಿದಂತೆ ಕಾಣಿಸುವುದು. ಸುಟ್ಟಂತೆ ದುಂಡಾಗಿ ಅರ್ಧ ಅಂಗುಲಕ್ಕೆ ಜಾಸ್ತಿಯಿರುವ ಆಕಾರ ಪ್ರಕೃತಿಗೆ ಗುರುತಾದರೆ, ಆ ಆಕಾರದ ಮಧ್ಯದಲ್ಲಿ ಎತ್ತರವಾಗಿ ತೊಗರಿ ಕಾಳಿನಷ್ಟು ಇರುವ ಆಕಾರ ಪರಮಾತ್ಮನ ಗುರುತಾಗಿದೆ. ಪ್ರಕೃತಿ, ಪರಮಾತ್ಮನ ಗುರುತಿರುವಂತೆ, ಪ್ರಕೃತಿ ಪರಮಾತ್ಮರಿಂದಲೇ ನೀನು ಹುಟ್ಟಿದ್ದೀಯ, ನಿನ್ನ ಶರೀರ ಹುಟ್ಟಿದೆಯೆಂದು ತಿಳಿದುಕೊಳ್ಳುವಂತೆ, ಈ ಗುರುತಿನಲ್ಲಿರುವ ಎರಡು ಚಿಹ್ನೆಗಳು ನಿನಗೆ ತಾಯಿತಂದೆ ಗುರುತುಗಳಾಗಿ ಲೆಕ್ಕಿಸಲ್ಪಡುತ್ತಿವೆ. ಪ್ರತಿ ಮನುಷ್ಯ ತಾಯಿಯಾದ ಪ್ರಕೃತಿಯಿಂದ ತಂದೆಯಾದ ಪರಮಾತ್ಮನಿಂದಲೇ ಹುಟ್ಟಿದ್ದಾನೆನ್ನುವ ಅರ್ಥವನ್ನು ಎದೆಯ ಮೇಲಿನ ಮುದ್ರೆಗಳು ಗುರುತು ಮಾಡುತ್ತಿವೆ. ಪ್ರಕೃತಿ ಭಾಗವಾಗಿ ಗುರುತಿಸುತ್ತಿರುವ ಅರ್ಧ ಅಂಗುಲ ಅಗಲ ವೃತ್ತಾಕಾರದ ಮಧ್ಯದಲ್ಲಿ ಎತ್ತರವಾಗಿ ಒಂದು ಆಕಾರವಿರುವುದರಿಂದ ಪ್ರಕೃತಿಗೆ ಆಧಾರವಾಗಿ, ಅಧ್ಯಕ್ಷನಾಗಿ ಪರಮಾತ್ಮ ಇದ್ದಾನೆಂದು ತಿಳಿಯುತ್ತಿದೆ. ಈ ರೀತಿ ಎದೆಯ ಮೇಲೆ ದೇವರಿರಿಸಿದ ಮುದ್ರೆ ಬಹಳ ಆಧ್ಯಾತ್ಮಿಕ ಅರ್ಥವನ್ನು ಕೊಡುವಂತಿದ್ದರೂ, ಅದನ್ನು ಕುರಿತು ಯಾವ ಆಧ್ಯಾತ್ಮಿಕವೇತ್ತರು ಗಮನ ಕೊಟ್ಟಿಲ್ಲ. ಈಗ ಇದನ್ನು ನಾವು ಹೇಳಿಕೊಳ್ಳುವುದರಿಂದ ದೇವರಿಗೆ ಇರುವ ಸಮಸ್ತ ಜ್ಞಾನಗಳಲ್ಲಿ ಒಂದು ಜ್ಞಾನವನ್ನು ನಾವು ತಿಳಿದುಕೊಂಡ ಹಾಗಾಗಿದೆ. ಈ ಮುದ್ರೆಯನ್ನು ಕುರಿತು ಪ್ರತಿ ಮುಸ್ಲಿಮ್, ಪ್ರತಿ ಕ್ರೈಸ್ತನೂ, ಪ್ರತಿ ಹಿಂದುವೂ (ಇಂದೂ) ಯೋಚಿಸಬೇಕೆಂದು ತಿಳಿಸುತ್ತಿದ್ದೇವೆ.

ದೇವರು ಪ್ರಪಂಚವನ್ನು, ಅದರೊಳಗಿನ ಜೀವರಾಶಿಗಳನ್ನು ಸೃಷ್ಠಿಸಿ ಜೀವರಾಶಿಗಳು ಬದುಕುವುದಕ್ಕೆ ವಿಧಿ ವಿಧಾನವನ್ನು ಸಹ ಕಲ್ಪಿಸಿದ್ದಾನೆ. ಸೃಷ್ಠಿಯ ಪ್ರಾರಂಭದಲ್ಲಿಯೇ ಜೀವಿಗಳನ್ನು, ಅವುಗಳಿಗೆ ಕರ್ಮವನ್ನು ಸೃಷ್ಠಿಸಿದ ದೇವರು, ಆ ಕರ್ಮದಿಂದ ಹೊರಬಿದ್ದು ದೇವರನ್ನು ಸೇರಿಕೊಳ್ಳುವ ಮಾರ್ಗವನ್ನು ಸಹ

ತಿಳಿಸಿದ್ದಾನೆ. ತನ್ನನ್ನು (ದೇವರನ್ನು) ಸೇರಿಕೊಳ್ಳುವ ಮಾರ್ಗವನ್ನೇ ಜ್ಞಾನಮಾರ್ಗ ಎನ್ನುತ್ತಿದ್ದೇವೆ. ದೇವರಿಗೆ ಸಂಬಂಧಿಸಿದ ಧರ್ಮಗಳನ್ನು ತಿಳಿದುಕೊಳ್ಳುವುದೇ ಜ್ಞಾನವಾಗುತ್ತದೆ. ಮನುಷ್ಯನನ್ನು ತಯಾರು ಮಾಡಿ, ಅವನು ಪ್ರಪಂಚದಲ್ಲಿ ಏನು ಮಾಡಬೇಕೆನ್ನುವುದಕ್ಕೆ ತಕ್ಕ ಕರ್ಮವನ್ನು ನಿರ್ಮಿಸಿದಾಗ ಅದಕ್ಕೆ ಅನುಬಂಧವಾಗಿರುವುವೆಲ್ಲ ತಯಾರಾಗಿವೆ. ಕರ್ಮ ಎರಡು ವಿಧಗಳಾದರೆ, ಅದರೊಂದಿಗಿರುವ ಗುಣಗಳು ಸಹ ಎರಡು ವಿಧಗಳಾಗಿ ಏರ್ಪಟ್ಟಿವೆ. ಗುಣಗಳು ಎರಡು ಭಾಗಗಳಾದರೆ ಅವುಗಳಿಗೆ ಸಂಬಂಧಿಸಿದ ಆಚರಣೆಗಳು ಎರಡು ವಿಧಗಳಾಗಿ ಏರ್ಪಟ್ಟಿವೆ. ಹಾಗೆ ಅನುಭವಗಳು ಸಹ ಎರಡು ವಿಧಗಳಾಗಿ ಏರ್ಪಟ್ಟಿವೆ. ಇವುಗಳಲ್ಲಿ ಯಾವ ಗುಣಗಳು ಯಾವಾದರೆ ಮನುಷ್ಯನ ಶರೀರದಲ್ಲಿವೆಯೋ ಅವು ಪ್ರಕೃತಿ ಜನಿತಗಳು. ಶರೀರ ಪ್ರಕೃತಿಯಿಂದ ಹುಟ್ಟಿದಂತೆ ಗುಣಗಳು ಸಹ ಪ್ರಕೃತಿಯಿಂದ ಹುಟ್ಟಿವೆ. ಪ್ರಕೃತಿಯಿಂದ ಹುಟ್ಟಿದ ಶರೀರದಲ್ಲಿ ಮುಖ್ಯಪಾತ್ರವನ್ನು ಗುಣಗಳೇ ಪೋಷಿಸುತ್ತಿವೆ. ಗುಣಗಳು ಕಾರ್ಯಾಚರಣೆಗೆ ಸೂತ್ರಗಳಾದರೂ ಗುಣಗಳೆಲ್ಲವೂ ಸೇರಿ ಮಾಯೆ ಎನ್ನುವ ಒಂದು ಪ್ರತ್ಯೇಕ ಶಕ್ತಿಯಾಗಿ ಶರೀರದಲ್ಲಿ ತಯಾರು ಮಾಡಲ್ಪಟ್ಟಿವೆ. ದೇವರಿಂದ ತಯಾರು ಮಾಡಲಾದ ಮಾಯೆ ಎನ್ನುವ ಶಕ್ತಿಗೆ ದೇವರು ಪ್ರತ್ಯೇಕವಾದ ಜವಾಬ್ದಾರಿಯನ್ನು ಒಪ್ಪಿಸಿದ್ದಾನೆ. ಆ ಜವಾಬ್ದಾರಿ ಏನೆಂದರೆ! ದೇವರು ಮನುಷ್ಯನನ್ನು ಕರ್ಮದಿಂದ ಹೊರಬೀಳುವುದಕ್ಕೆ ತನ್ನ ಧರ್ಮಗಳನ್ನು ಜ್ಞಾನರೂಪವಾಗಿ ಹೇಳಿದ್ದಾನಲ್ಲವೇ! ಮನುಷ್ಯನನ್ನು ತನ್ನ ಧರ್ಮಗಳ ಕಡೆಗೆ ಬಾರದ ಹಾಗೆ ಮಾಡುವುದೇ ಮಾಯೆಗೆ ಒಪ್ಪಿಸಿದ ಕೆಲಸ. ತನಗೆ ಇಷ್ಟವಾದವನನ್ನು ಮಾತ್ರ ಆತಂಕಪಡಿಸದೆ ಬಿಟ್ಟುಕೊಟ್ಟು, ತನಗೆ ಇಷ್ಟ ಇಲ್ಲದವನನ್ನು ತನ್ನ ಕಡೆ ಬಾರದಂತೆ ಮಾಡಬೇಕೆಂದು ಮಾಯೆಯನ್ನು ದೇವರು ಆಜ್ಞಾಪಿಸಿದ್ದಾನೆ. ಈ ವಿಷಯ ಯಾರಿಗೂ ಗೊತ್ತಿಲ್ಲ. ದೇವರು ಮಾಯೆಗೆ ಒಪ್ಪಿಸಿದ ಜವಾಬ್ದಾರಿ ಅತ್ಯಂತ ರಹಸ್ಯವಾದದ್ದು. ಆದ್ದರಿಂದ ಅದು ರಹಸ್ಯವಾಗಿಯೇ ಯಾರಿಗೂ ತಿಳಿಯದಂತೆ ಇದೆ. ಎಲ್ಲ ಮತಗಳಲ್ಲಿಯೂ ಮಾಯೆ ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುತ್ತಿದೆ. ಹಿಂದೂ (ಇಂದೂ) ಮತದಲ್ಲಿ **ಮಾಯೆ** ಎಂದು ಕರೆದರೆ, ಇಸ್ಲಾಂನಲ್ಲಿ ಸೈತಾನ್ ಎಂದು, ಕ್ರೈಸ್ತದಲ್ಲಿ

ಸಾತಾನ್ ಎನ್ನುವ ಹೆಸರಿನಿಂದ ಕರೆಯಲ್ಪಡುತ್ತದೆ. ಮಾಯೆ ಎನ್ನುವುದು ದೇವರ ಜ್ಞಾನಕ್ಕೆ ವಿರುದ್ಧವಾದದ್ದೆಂದು, ದೈವಮಾರ್ಗದಲ್ಲಿ ಅಡಚಣೆಗಳನ್ನು ಕಲ್ಪಿಸುತ್ತದೆಂದು ಎಲ್ಲರಿಗೂ ಗೊತ್ತು.

ಮಾಯೆ ಎನ್ನುವುದು ದೈವಕ್ಕೆ ವಿರುದ್ಧವಾದದ್ದೆಂದು, ಅದು ಬಹಳ ಬಲವಾದದ್ದೆಂದು, ಅದರ ಮುಂದೆ ಎಂತಹವನಾದರೂ ಜ್ಞಾನಮಾರ್ಗವನ್ನು ಬಿಟ್ಟು ಅಜ್ಞಾನ ಮಾರ್ಗದಲ್ಲಿ ಹೋಗಬೇಕಾದ್ದೇ ಎಂದು, ಅದನ್ನು ಜಯಿಸುವುದು ದುಸ್ಸಾಧ್ಯವೆಂದು ಕೆಲವರು ಹೇಳುತ್ತಿರುತ್ತಾರೆ. ಭಗವದ್ಗೀತೆಯಲ್ಲಿಯೂ "ಮಮ ಮಾಯ ದುರತ್ಯಯಾ" ನನ್ನ ಮಾಯೆಯನ್ನು ಜಯಿಸುವುದು ದುಸ್ಸಾಧ್ಯವೆಂದು ಹೇಳಲಾಗಿದೆ. ಮಾಯೆಯನ್ನು ಜಯಿಸುವುದು ಸಾಧ್ಯವಿಲ್ಲವೆಂದು ಕೆಲವರು ಹೇಳುತ್ತಿದ್ದರೂ, ಮಾಯೆಗೆ ಅಷ್ಟು ಬಲ ಹೇಗೆ ಬಂದಿದೆಯೆಂದು ಯಾರೂ ಆಲೋಚಿಸಲಿಲ್ಲ. ಭಗವದ್ಗೀತೆಯಲ್ಲಿ ದೇವರೇ ಸ್ವತಃ ಮಮ ಮಾಯೆ ಎಂದು ಹೇಳಿದ್ದಾನೆ. **ಮಮ ಮಾಯಾ** ಎಂದರೆ ನನ್ನ ಮಾಯೆ ಎಂದು ಅರ್ಥ. ಆತನ (ದೇವರ) ಮಾಯೆ ಆತನ ಮಾರ್ಗಕ್ಕೆ ಆತಂಕವನ್ನು ಕಲ್ಪಿಸುತ್ತಿದೆಯಲ್ಲ! ದೇವರ ಜ್ಞಾನದ ಕಡೆ ಹೋಗಬೇಕೆಂದುಕೊಂಡವರನ್ನು ಅನೇಕ ಕಷ್ಟಗಳ ಪಾಲು ಮಾಡಿ ಕೊನೆಗೆ ಆ ಮಾರ್ಗವನ್ನು ಬಿಟ್ಟು ಅಜ್ಞಾನಮಾರ್ಗದಲ್ಲಿ ಹೋಗುವಂತೆ ಮಾಡುತ್ತಿದೆಯಲ್ಲ! ಹಾಗಿರುವಾಗ ಅದು ದೇವರಿಗೆ ಪ್ರತಿ ಪಕ್ಷವಾಗಿ ಇರುವಂತೆ ಅಲ್ಲವೇ! ಅಂತದ್ದನ್ನು ದೇವರು ನನ್ನ ಮಾಯೆ ಎನ್ನುವದೇನು? ಎಂದು ಯಾರಾದರೂ ಕೇಳಬಹುದು. ಅದಕ್ಕೆ ಉತ್ತರವೇನೆಂದರೆ! ದೇವರೇ ಮಾಯೆಯನ್ನು ತಯಾರು ಮಾಡಿ, ಮಾಯೆಗೆ ಒಂದು ಕೆಲಸವನ್ನು ಒಪ್ಪಿಸಿದ್ದಾನೆ. ಅಂದಿನಿಂದ ಇಂದಿನವರೆಗೂ ಮಾಯೆ ದೇವರು ಹೇಳಿದ ಕೆಲಸವನ್ನು ಶ್ರದ್ಧೆಯಿಂದ, ಭಕ್ತಿಯಿಂದ ಮಾಡುತ್ತಿದೆ. **ಕೆಲವು ಸಮಯಗಳಲ್ಲಿ ಮಾತ್ರ ದೇವರ ಮೇಲೆ ಭಕ್ತಿ ಇರುವಂತೆ ನಟಿಸಿ ನಂತರ ಪ್ರಪಂಚ ವಿಷಯಗಳ ಮೇಲೆಯೇ ಶ್ರದ್ಧೆ ಇರುವವರು ದೇವರಿಗೆ ಇಷ್ಟರಲ್ಲ. ದೇವರಿಗೆ ಇಷ್ಟವಿಲ್ಲದವರನ್ನು ಗ್ರಹಿಸಿ ಮಾಯೆ ಅವರನ್ನು ಅದೇ ಕೆಲಸವಾಗಿ ದೇವರಿಗೆ ದೂರವಾಗುವಂತೆ ಮಾಡುತ್ತಿದೆ.** ಯಾರು

ದೇವರಿಗೆ ಇಷ್ಟವಾಗುವಂತೆ ಭಕ್ತಿ ಶ್ರದ್ಧೆಗಳಿಂದ ವರ್ತಿಸುತ್ತಾರೊ, ಯಾರು ಅನ್ಯದೇವತೆಗಳ ಮೇಲೆ ಜ್ಞಾನವಿಲ್ಲದೆ ಎಲ್ಲರಿಗಿಂತ ದೊಡ್ಡವನು ದೇವರೆಂದು ತಿಳಿದು ವರ್ತಿಸುತ್ತಾರೊ, ಅಂತವರಿಗೆ ಮಾಯೆ ಯಾವುದೇ ಅಡಚಣೆಯನ್ನು ಕಲ್ಪಿಸುವುದಿಲ್ಲ. ಸ್ವಲ್ಪ ಹೊತ್ತು ದೇವರು ದೊಡ್ಡವನೆಂದು, ದೈವಜ್ಞಾನ ದೊಡ್ಡದೆಂದು ಹೊಗಳಿ ನಂತರ ಯಾರಿಗೂ ತಿಳಿಯದ ಹಾಗೆ ಇತರ ದೇವತೆಗಳನ್ನು ಕೂಡಾ ಆರಾಧಿಸುವವರನ್ನು ಮಾಯೆ ದೇವರಿಗೆ ಯಾವುದೋ ಒಂದು ವಿಧವಾಗಿ ದೂರ ಮಾಡುತ್ತದೆ.

ಮನುಷ್ಯ ಮೇಲ್ನೋಟಕ್ಕೆ ಹೇಗೆ ಕಾಣಿಸಿದರೂ, ನಿಜವಾದ ದೈವಜ್ಞಾನಿಯಾಗಿ ನಟಿಸಿದರೂ, ಅಂತರಂಗದಲ್ಲಿ ಅವನಲ್ಲಿ ಏನಿದೆಯೋ ಗ್ರಹಿಸುವ ಮಾಯೆ, ದೇವರ ಮೇಲೆ ಶ್ರದ್ಧೆ ಇಲ್ಲದವನನ್ನು ಆರಿಸಿ ಹಾಕಿದಂತೆ, ದೇವರ ಜ್ಞಾನಕ್ಕೆ ಅವನನ್ನು ದೂರವಾಗಿ ಹೋಗುವಂತೆ ಮಾಡುತ್ತಿದೆ. ಇದೇ ವಿಷಯವನ್ನೇ ವೇಮನ ಯೋಗಿ ತನ್ನ ಪದ್ಯದಲ್ಲಿ ಹೀಗೆ ಹೇಳಿದ್ದಾನೆ.

*ಪತಿಯೊಪ್ಪಿದರೆ ಸತಿಯೊಪ್ಪುವಳು*
*ಪತಿಸತಿ ಒಂದಾದರೆ ಪರಮಪಾವನದಲ್ಲಿ*
*ಪತಿ ಸತಿ ನ್ಯಾಯವೇ ಮೋಕ್ಷವು*
*ಬತುಲಿತ ಪರಮಾತ್ಮನಲ್ಲೈಕ್ಯವಾಗೋ ವೇಮಾ.*

**ಭಾವಾರ್ಥ :–** ಪತಿಯೆಂದರೆ ಗಂಡ, ಸತಿ ಅಂದರೆ ಹೆಂಡತಿ ಎಂದು ಎಲ್ಲರಿಗೂ ತಿಳಿದಿದೆ. ಮದುವೆ ಆದರೇನೆ ಪತಿ ಸತಿಗಳಾಗುತ್ತಾರೆನ್ನುವ ವಿಷಯವು ಸಹ ತಿಳಿದಿದೆ. ಪತಿ, ಸತಿಗಳಿಗೆ ಮಕ್ಕಳು ಹುಟ್ಟುತ್ತಾರೆನ್ನುವುದು ಸಹ ತಿಳಿದಿದೆ. ಈ ವಿಧಾನವೆಲ್ಲಾ ಜ್ಞಾನಿಗಳಿಗೆ, ಅಜ್ಞಾನಿಗಳಿಗೆ ಎಲ್ಲರಿಗೂ ತಿಳಿದಿದ್ದರೂ ಬಹಳ ಜನರಿಗೆ ಈ ವಿಷಯ ದೈವಿಕವಾದದ್ದೆಂದು, ಆ ದೈವಿಕ ವಿಷಯವೇ ಪ್ರಪಂಚದಲ್ಲಿ ಹೀಗೆ ಪ್ರತಿಬಿಂಬಿಸಿದೆಯೆಂದು, ಪ್ರಪಂಚದಲ್ಲಿ ಪ್ರತ್ಯಕ್ಷವಾಗಿರುವ ಪತಿ, ಸತಿಗಳ ವಿಧಾನವನ್ನು ಆಧಾರ ಮಾಡಿಕೊಂಡು ಪರೋಕ್ಷವಾಗಿರುವ ದೈವವಿಧಾನವನ್ನು

ಅರ್ಥ ಮಾಡಿಕೊಳ್ಳುತ್ತಾರೆಂದು ದೇವರೇ ಹೀಗೆ ಇಟ್ಟಿದ್ದಾನೆ. ದೈವಿಕವಾದ ಪತಿ, ಸತಿ ವಿಧಾನ ಯಾವುದೋ ಈಗ ವಿವರಿಸಿ ನೋಡಿಕೊಳ್ಳೋಣ.

ಭಗವದ್ಗೀತೆ ಗುಣತ್ರಯ ವಿಭಾಗಯೋಗವೆಂಬ ಅಧ್ಯಾಯದಲ್ಲಿ ಮೊದಲಿಗೆ ಪರಮಾತ್ಮನನ್ನು ಪತಿಯೆಂದು, ಪ್ರಕೃತಿಯನ್ನು ಸತಿಯೆಂದು ಹೇಳಿದ್ದಾರೆ. ಶ್ರೀಕೃಷ್ಣನು ಹೇಳಿದ ಭಗವದ್ಗೀತೆ ಪ್ರಕಾರ ಜಗತ್ತು ಎಲ್ಲದಕ್ಕೂ ಪ್ರಕೃತಿ, ಪುರುಷರು ಸತಿ ಪತಿಗಳಾಗಿದ್ದೂ, ಪ್ರತಿ ಜೀವರಾಶಿಗೆ ಅವರೇ ತಾಯಿ ತಂದೆಯರಾಗಿದ್ದಾರೆ. ಪ್ರಪಂಚದಲ್ಲಿನ ಮನುಷ್ಯನ ಜಾತಿಗೆ ಅಲ್ಲದೆ ಕ್ರಿಮಿ, ಕೀಟ, ಪಶು, ಪಕ್ಷಿ, ವೃಕ್ಷಲತೆಗಳೆಲ್ಲವುಗಳಿಗೂ ತಾಯಿ ಪ್ರಕೃತಿ, ತಂದೆ ಪರಮಾತ್ಮ ಎಂದು ತಿಳಿಸಲಾಗಿದೆ. ಜಗತ್ತು ಎಲ್ಲದಕ್ಕೂ ತಾಯಿ ತಂದೆಯರಾಗಿದ್ದು, ಪತಿ ಸತಿಗಳಾಗಿ ಒಪ್ಪುವ ಪರಮಾತ್ಮ ಪ್ರಕೃತಿ ಪ್ರಪಂಚದಲ್ಲಿ ವಿಭಿನ್ನವಾಗಿ ವರ್ತಿಸುತ್ತಿದ್ದಾರೆ. ಪತಿಯಾದ ಪರಮಾತ್ಮನಿಗೆ ಸತಿಯಾದ ಪ್ರಕೃತಿ ವಿಧೇಯಳಾಗಿ, ಪರಮಾತ್ಮ ಆದೇಶಾನುಸಾರ ಜಗತ್ತಿನ ಬಗ್ಗೆ ಪರಮಾತ್ಮ ಮಾರ್ಗವಾದ ದೈವಮಾರ್ಗಕ್ಕೆ ಪ್ರಕೃತಿಯಾದ ಮಾಯೆ ಬಹಳ ವಿರುದ್ಧವಾಗಿದೆ. ದೈವಮಾರ್ಗ ವನ್ನು ಅನುಸರಿಸಬೇಕೆಂದುಕೊಂಡವನನ್ನು ಆ ಪ್ರಯತ್ನವನ್ನು ಭಂಗ ಮಾಡಿ ವಿರಮಿಸಿಕೊಳ್ಳುವಂತೆ ಮಾಡುತ್ತದೆ. ಎಲ್ಲವೂ ದೇವರಿಗೆ ತಿಳಿದೇ ನಡೆಯುತ್ತದೆ. ದೇವರನ್ನು ಕುರಿತ ಪ್ರಯತ್ನದಲ್ಲಿ ಮಾಯೆ ಪ್ರಭಾವಕ್ಕೆ ತಡೆದುಕೊಳ್ಳಲಾರದೆ ಎಲ್ಲರೂ ಹಿಂತಿರುಗುತ್ತಾರೆ. ಆದರೂ ಹಲವು ಲಕ್ಷ ಜನರಲ್ಲಿ ಯಾರೊಬ್ಬರೋ ಮಾಯೆಯನ್ನು ವಿರೋಧಿಸಿ ಎಲ್ಲಾ ಕಷ್ಟಗಳನ್ನೂ ಸಹಿಸಿಕೊಂಡು ದೇವರನ್ನು ಸೇರಿಕೊಳ್ಳಬೇಕೆಂದು ಪ್ರಯತ್ನಿಸುತ್ತಿದ್ದಾರೆ. ಅಂಥವನನ್ನು ದೇವರು, ಅವನ ಮಾರ್ಗವನ್ನು ಸುಗಮ ಮಾಡಿ ಮಾಯೆ ಅಡಚಣೆಯನ್ನು ತೊಲಗಿಸಿ, ತನ್ನಲ್ಲಿಯೇ ಸೇರಿಸಿಕೊಳ್ಳುವನು. ಬಲವಾದ ಮಾಯೆ ಕಲ್ಪಿಸುವ ಪರಿಸ್ಥಿತಿಗಳೆಲ್ಲವನ್ನು ಅನುಭವಿಸುತ್ತಾ ಛಲ ಬಿಡದೆ ದೇವರಿಗಾಗಿ ಪ್ರಯತ್ನಿಸುವವನನ್ನು ದೇವರು ಒಪ್ಪಿಕೊಳ್ಳುವನು. ದೇವರು ಒಪ್ಪಿಕೊಂಡಾಗ ಮಾಯೆ ಅವನನ್ನು ಆತಂಕಪಡಿ ಸುವುದಿಲ್ಲ. ಅಂತವನ ಯೋಗ ಕ್ಷೇಮವನ್ನು ದೇವರೇ ಪರೀಕ್ಷಿಸುವನು. ಆಗ ಅವನು ದೇವರಲ್ಲಿ ಐಕ್ಯವಾಗುವನು.

ಪ್ರಪಂಚದಲ್ಲಿ ಮಾಯೆ ಕಲ್ಪಿಸುವ ಅನೇಕ ಕಷ್ಟಗಳನ್ನು ಅತಿಕ್ರಮಿಸಿ ದೇವರ ಮಾರ್ಗವನ್ನು ಬಿಡದವನನ್ನು, ದೇವರು ತನ್ನ ಮನುಷ್ಯನನ್ನಾಗಿ ಅಂಗೀಕರಿಸುವನು. ಆಗ ತಕ್ಷಣವೆ ಪ್ರಕೃತಿಯಾದ ಮಾಯೆ ತಾನು ಸಹ ಅವನನ್ನು ಒಪ್ಪಿಕೊಂಡು ಅವನಿಗೆ ಅಡಚಣೆ ಮಾಡುವುದಿಲ್ಲ. ಆದ್ದರಿಂದ ಮೇಲಿನ ಪದ್ಯದಲ್ಲಿ ಪತಿಯೊಪ್ಪಿದರೆ ಸತಿ ಒಪ್ಪುತ್ತಾಳೆಂದಿದ್ದಾರೆ. ಆ ವಿಧವಾಗಿ ಪರಮಾತ್ಮ, ಪ್ರಕೃತಿ ಇಬ್ಬರೂ ಅವನ ಬಗ್ಗೆ ಒಂದಾಗಿ ನಡೆದುಕೊಂಡಾಗ ಅವನು ಮೋಕ್ಷವನ್ನು ಹೊಂದುವನು. ಅದನ್ನೇ ಪದ್ಯದಲ್ಲಿ ವ್ಯಕ್ತಪಡಿಸುತ್ತಾ ಪತಿಸತಿಗಳೊಂದಾದರೆ ಪರಮ ಪಾವನವಾಗುವುದು ಎಂದಿದ್ದಾರೆ. ಪತಿ, ಸತಿ ಇಬ್ಬರೂ ಒಂದು ಮಾರ್ಗವನ್ನು ನಡೆದುಕೊಳ್ಳುವುದು ನ್ಯಾಯವಾಗುತ್ತದೆ. ಪತಿಗೆ ಸತಿ ವಿರುದ್ಧವಾಗಿ ನಡೆದುಕೊಳ್ಳುವುದು ಅನ್ಯಾಯವಾಗುತ್ತದೆ. ಪ್ರಕೃತಿ, ಪರಮಾತ್ಮ ಭಕ್ತನ ಬಗ್ಗೆ ನ್ಯಾಯಮಾರ್ಗವನ್ನು ಅನುಸರಿಸಿದರೆ ಮೋಕ್ಷ ಲಭಿಸುತ್ತದೆ. ಆದ್ದರಿಂದ ಮೇಲಿನ ಪದ್ಯದಲ್ಲಿ ಪತಿ ಸತಿ ನ್ಯಾಯವೇ ಮೋಕ್ಷ ಎಂದಿದ್ದಾರೆ. ಪತಿ, ಸತಿ ನ್ಯಾಯವಾಗಿ ನಡೆದುಕೊಂಡಾಗ ಭಕ್ತನು ಕೂಡಲೇ ಜನ್ಮರಾಹಿತ್ಯ ಹೊಂದುವನು. ಆದ್ದರಿಂದ ಬತುಲಿತ ಪರಮಾತ್ಮನಲ್ಲಿ ಐಕ್ಯವಾಗು ಎಂದಿದ್ದಾರೆ.

ಪ್ರಪಂಚದಲ್ಲಿ ಒಬ್ಬ ಭಕ್ತನ ಬಗ್ಗೆ ಸತಿ ಪತಿಗಳಾದ ಪ್ರಕೃತಿ, ಪರಮಾತ್ಮರು ಮೊದಲು ಅನ್ಯಾಯವಾಗಿ ವರ್ತಿಸುವರೆಂದು ಈ ಪದ್ಯದಿಂದ ವೇಮನ ನಮಗೆ ತಿಳಿಸಿದ್ದಾನೆ. ಪತಿ ಒಪ್ಪಿಕೊಂಡಾಗಲೇ ಸತಿಯು ಒಪ್ಪಿಕೊಂಡು ಇಬ್ಬರೂ ನ್ಯಾಯವಾಗಿ ವರ್ತಿಸುವರು. ಅವರಿಬ್ಬರೂ ಒಂದಾಗಿ ನ್ಯಾಯವಾಗಿ ವರ್ತಿಸಿದಾಗಲೇ ಭಕ್ತನಿಗೆ ಮೋಕ್ಷ ಸಿಗುತ್ತದೆ. ಮಾಯೆ ಅಡಚಣೆಗಳನ್ನು ಸುಧಾರಿಸಿಕೊಳ್ಳದೆ ನಾನೆಷ್ಟು ಭಕ್ತಿಯಿಂದ ಇದ್ದರೂ ನನಗೇ ಕಷ್ಟಗಳು ಬರುತ್ತವೆಂದು, ದೇವರ ಹತ್ತಿರ ನ್ಯಾಯವೇ ಇಲ್ಲವೆಂದುಕೊಂಡವನು ದೇವರ ಮಾರ್ಗದಲ್ಲಿ ಭ್ರಷ್ಟನಾಗುತ್ತಾನೆ. ದೇವರನ್ನು ಕುರಿತು ಏನೂ ಅನ್ನದೆ ಎಲ್ಲದಕ್ಕೂ ಸುಧಾರಿಸಿಕೊಂಡವನು, ಪರಮಾತ್ಮನಿಂದ ಒಪ್ಪಿಗೆ ಪಡೆದು ಪ್ರಕೃತಿ ಪರಮಾತ್ಮರು ನ್ಯಾಯವಾಗಿ ವರ್ತಿಸಿದಾಗ ಅವನು ಮೋಕ್ಷ ಹೊಂದುವನು.

ಪತಿ ಸತಿಯರ ವಿಧಾನ ಪ್ರಪಂಚದಲ್ಲಿ ಪ್ರತಿಬಿಂಬಿಸಿದೆಯೆಂದು ಮೊದಲೇ ಹೇಳಿದ್ದೇವೆ. ಪತಿಗೆ ಸತಿ ವಿರುದ್ಧವಾಗಿ ನಡೆದುಕೊಳ್ಳುವುದು, ಪತಿಯನ್ನು ತನ್ನ ಮಾತು ಕೇಳುವಂತೆ ಮಾಡಿಕೊಳ್ಳುವ ಅನ್ಯಾಯವಿಧಾನ ಭೂಮಿ ಮೇಲೆ ಇದೆ. ಹಾಗೆ ಪತಿಗೆ, ಸತಿ ಅನುಕೂಲವಾಗಿ ನಡೆದುಕೊಳ್ಳುವುದು, ಪತಿಯ ಮಾತನ್ನೇ ತನ್ನ ಮಾತೆಂದು ಪತಿ ಹೇಳಿದಂತೆ ಸತಿ ನಡೆದುಕೊಳ್ಳುವ ನ್ಯಾಯ ಮಾರ್ಗವೂ ಭೂಮಿ ಮೇಲಿದೆ. ನಿಮ್ಮ ಅನುಭವದಲ್ಲಿ ನ್ಯಾಯ ಅನ್ಯಾಯ, ಪತಿ ಸತಿಯರನ್ನು ಕುರಿತು ತಿಳಿಯುವುದಾದರೆ ಯಾರಾದರೂ ಸಂಪೂರ್ಣ ಜ್ಞಾನಿಗಳಾಗಬಹುದು. ದೇವರ ಮಾರ್ಗದಲ್ಲಿ ನಡೆದುಕೊಳ್ಳುವವರಿಗೆ ಅಡಚಣೆಗಳೇ ರ್ಪಟ್ಟರೂ, ದೇವರ ಹತ್ತಿರ ನ್ಯಾಯವಿದೆಯೇ? ಎಂದು ಸಹನೆಯನ್ನು ಕಳೆದುಕೊಂಡು ಮಾತನಾಡುವುದಿಲ್ಲ. ಎಷ್ಟು ಕಷ್ಟಗಳು ಬಂದರೂ ಇದು ತಾಯಿಯಾದ ಮಾಯೆ ಕೆಲಸವೆಂದು ಜ್ಞಾಪಕದಲ್ಲಿಟ್ಟುಕೊಂಡು ನಡೆದುಕೊಳ್ಳು ವರು.

ಮೇಲೆ ವೇಮನ ಯೋಗಿ ಹೇಳಿದಂತೆ, ಭಗವದ್ಗೀತೆಯಲ್ಲಿ ವಿಜ್ಞಾನ ಯೋಗವೆನ್ನುವ ಅಧ್ಯಾಯದಲ್ಲಿ 14ನೇ ಶ್ಲೋಕದಲ್ಲಿ ಹೀಗಿದೆ.

**ಶ್ಲೋ॥** ***ದೈವೀ ಹ್ಯೇಷಾ ಗುಣಮಯಿ ಮಮ ಮಾಯಾ ದುರತ್ಯಯಾ ।***
***ಮಾ ಮೇವ ಯೇ ಪ್ರಪದ್ಯನ್ತೇ ಮಾಯಾ ಮೇತಾಂ ತರನ್ತಿತೇ ॥***

**ಭಾವಾರ್ಥ :–** ದೇವನಾದ ನಾನು ಸೃಷ್ಟಿಸಿದ ಗುಣಗಳಿಂದ ಕೂಡಿರುವ ನನ್ನ ಮಾಯೆ ದುಸ್ಸಾಧ್ಯವಾದದ್ದು. ಯಾರು ನನ್ನನ್ನೇ ಆರಾಧಿಸುತ್ತಾನೋ ಅಂಥವನು ನನ್ನ ಮಾಯೆಯನ್ನು ಸುಲಭವಾಗಿ ದಾಟಿ ಹೋಗಬಲ್ಲವನು.

ನೋಡಿದಿರಾ! ಭಗವದ್ಗೀತೆಯಲ್ಲಿ ದೇವರ ವಾಕ್ಯ! ದೇವರೇ ತನ್ನ ಮಾಯೆಯನ್ನು ದುಸ್ಸಾಧ್ಯವಾದದ್ದೆಂದು, ಅದನ್ನು ದಾಟಿ ಯಾರೂ ಹೋಗಲಾರರೆಂದು ಹೇಳಿದ್ದಾನೆ. ಹಾಗಿರುವಾಗ ಮಾಯೆ ಎಷ್ಟು ಬಲವಾದದ್ದೆಂದು ಹೇಳುವ ಅವಶ್ಯವಿಲ್ಲ. ನಾನು ಜ್ಞಾನಿ, ಯೋಗಿ, ಸ್ವಾಮಿ, ವಿಶ್ವಾಸಿ ಎಂದು ಯಾರಾದರೂ ಅಂದುಕೊಂಡ ಮಾತ್ರಕ್ಕೆ ಅವನನ್ನು ಮಾಯೆ ಪರೀಕ್ಷಿಸದೆ

ಬಿಡುವುದಿಲ್ಲ. ಮಾಯೆಯ ಶೋಧನೆಯಲ್ಲಿ ಅವನು ದೇವರಿಗೆ ಇಷ್ಟವಾದವನಾದರೆ ಅವನನ್ನು ದೇವರ ಮಾರ್ಗದಲ್ಲಿ ಅಡಚಣೆಪಡಿಸುವುದಿಲ್ಲ. ಒಂದು ವೇಳೆ ಮೇಲ್ನೋಟಕ್ಕೆ ಜ್ಞಾನಿಯಾಗಿ ಕಾಣಿಸಿದರೂ, ಒಳಗಡೆ ದೇವರನ್ನು ಪೂರ್ತಿಯಾಗಿ ನಂಬಿದವನನ್ನು ಮಾತ್ರ ಮಾಯೆ ಬಿಡದೆ, ಆ ಮಾರ್ಗದಲ್ಲಿ ಎಲ್ಲರಿಗೂ ತಿಳಿಯುವಂತೆ ಭ್ರಷ್ಟನನ್ನಾಗಿ ಮಾಡುವುದು. ಇದೇ ವಿಷಯವನ್ನೇ "ಮೂರು ಕಾಲುವೆಗಳು ದಾಟಲಾರರಣ್ಣಾ" ಎಂದು ಪೋತುಲೂರು ವೀರಬ್ರಹ್ಮಯ್ಯನವರು ಸಹ ಹೇಳಿದ್ದಾರೆ. ಮೂರು ಕಾಲುವೆಗಳು ಅಂದರೆ ಮೂರು ಗುಣಗಳೆಂದು ಅರ್ಥ. ಸಾತ್ವಿಕ, ರಾಜಸ, ತಾಮಸ ಗುಣ ಭಾಗಗಳನ್ನು ಮೂರು ಕಾಲುವೆಗಳು ಎಂದಿದ್ದಾರೆ. ಮೂರು ಗುಣಗಳನ್ನೇ ಸೇರಿಸಿ ಮಾಯೆ ಅನ್ನುತ್ತಿದ್ದಾರೆ. ಇದನ್ನು ಅನುಸರಿಸಿ ನೋಡಿದರೆ ನಮ್ಮ ಶರೀರದಲ್ಲಿ ಮಾಯೆ ತಲೆಯಲ್ಲಿಯೇ ಜಾಗ ಮಾಡಿಕೊಂಡಿದೆಯೆಂದು, ಅದಕ್ಕೆ ತಿಳಿಯದಿರುವುದು ಏನೂ ನಡೆಯುವುದಿಲ್ಲ ವೆಂದು, ಏನು ನಡೆದರೂ ಗುಣಗಳಿಂದಲೇ ನಡೆಯುವುದರಿಂದ ಮಾಯೆಯನ್ನು ಅತಿಕ್ರಮಿಸಿ ಯಾರೂ ಹೋಗಲಾರರೆಂದು ಹೇಳಬಹುದು. ಅಷ್ಟು ಬಲವಾದ ಮಾಯೆಯನ್ನು ಯಾರು ಜಯಿಸುತ್ತಾರೆಂದರೆ, ಯಾರು ದೇವರನ್ನು ಆರಾಧಿಸಿ ಅವರಿಗೆ ಇಷ್ಟವಾದವರಾಗುತ್ತಾನೊ, ಅವರೇ ಗುಣಗಳಿಂದ ಕೂಡಿದ ಮಾಯೆಯನ್ನು ಜಯಿಸಿ ದಾಟಿಹೋಗುವನು. ಇದೇ ವಿಷಯವನ್ನೇ ಗೀತೆಯಲ್ಲಿ "ಯೇ ಮಾಮೇವ ಪ್ರಪದ್ಯನ್ತೇ" ಯಾರು ನನ್ನನ್ನೇ ಆರಾಧಿಸುತ್ತಾರೋ "ಮಾಯಾ ಮೇತಾಂ ತರನ್ತಿತೇ" ಅವರು ಮಾಯೆಯನ್ನು ದಾಟಿ ಹೋಗುವರು ಎಂದು ಭಗವಂತನು ಹೇಳಿದ್ದಾನೆ.

ದೇವರನ್ನು ಆರಾಧಿಸುವುದೆಂದರೆ ಅವನ ದೊಡ್ಡತನವೆಲ್ಲಾ ತಿಳಿದಿರ ಬೇಕು. ಅವನ ದೊಡ್ಡತನವೆಲ್ಲಾ ತಿಳಿಯಬೇಕೆಂದರೆ ಅವನ ಧರ್ಮಗಳೆಲ್ಲ ಶಾಸ್ತ್ರಬದ್ಧವಾಗಿ ತಿಳಿದಿರಬೇಕು. ಅವನ ಧರ್ಮಗಳೆಲ್ಲ ತಿಳಿಯಬೇಕೆಂದರೆ ಅವನ ಸಮಸ್ತ ಸಮಾಚಾರವು (ಸಮಸ್ತ ಜ್ಞಾನ) ತಿಳಿದಿರಬೇಕು. ಅವನ ಸಮಸ್ತ ಜ್ಞಾನ ತಿಳಿಯಬೇಕೆಂದರೆ ದೇವರಿಂದ ಹೇಳಲಾದ ಮೂಲಗ್ರಂಥಗಳಲ್ಲಿನ ಜ್ಞಾನವೆಲ್ಲಾ ತಿಳಿಯಬೇಕು. ಹಾಗೆ ತಿಳಿದಾಗಲೇ ದೇವರ ವಿಷಯದಲ್ಲಿ ಯಾವ

ಪ್ರಶ್ನೆ ಬಂದರೂ, ಅದಕ್ಕೆ ಮನುಷ್ಯರ ಹತ್ತಿರ ಉತ್ತರವಿರುತ್ತದೆ. ದೇವರ ವಿಷಯಕ್ಕೆ ಸಂಬಂಧಿಸಿದ ಯಾವ ಪ್ರಶ್ನೆಗಾದರೂ ಉತ್ತರವಿರುವಾಗ ಅವನು ದೇವರ ಕಡೆ ಪೂರ್ತಿ ಶಾಸ್ತ್ರಬದ್ಧವಾದ ವಿಶ್ವಾಸಿ ಆಗುವನು. ಹಾಗಲ್ಲದಿದ್ದರೆ ಯಾವ ಒಂದು ಪ್ರಶ್ನೆಗಾದರೂ ಸರಿಯಾದ, ಶಾಸ್ತ್ರಬದ್ಧವಾದ ಉತ್ತರ ಇಲ್ಲದೇ ಹೋದರೆ, ಆ ಪ್ರಶ್ನೆ ಪ್ರಶ್ನೆಯಾಗಿಯೇ ಉಳಿಯುತ್ತದೆ. ಉತ್ತರವಿಲ್ಲದ ಆ ಪ್ರಶ್ನೆಯಿಂದಲೆ ದೇವರ ಮಾರ್ಗದಲ್ಲಿ ಸಂಶಯ ಬರುವುದಕ್ಕೆ ಅವಕಾಶ ಏರ್ಪಡುತ್ತದೆ. ದೇವರ ಮಾರ್ಗದಲ್ಲಿ ಒಂದು ಪ್ರಶ್ನೆ ಉಳಿದರೂ ಅದರೊಂದಿಗೆ ಮಾಯೆ ಶೋಧಿಸಿ, ಅನುಮಾನವನ್ನು ಹೆಚ್ಚಿಸಿ, ಆ ಅನುಮಾನವನ್ನು ದೊಡ್ಡ ಅಡಚಣೆಯಾಗಿ ಬದಲಾಯಿಸಿ, ದೇವರ ಮಾರ್ಗದಿಂದ ತಪ್ಪಿಸುತ್ತದೆ. ಮನುಷ್ಯ ಎಲ್ಲರಿಗಿಂತ ನಾನೇ ಸರಿಯಾದ ಮಾರ್ಗದಲ್ಲಿ ಇದ್ದೇನೆಂದು ಅಂದುಕೊಳ್ಳುತ್ತಿದ್ದರೂ, ನನ್ನ ಮತವೇ ಸರಿಯಾದದ್ದೆಂದು ಅಂದುಕೊಳ್ಳುತ್ತಿದ್ದರೂ, ನಮ್ಮ ಮತದಲ್ಲಿನ ದೇವರೇ ನಿಜವಾದ ದೇವರೆಂದುಕೊಂಡರೂ ಪರವಾಗಿಲ್ಲ. ಆದರೆ ದೇವರಿಗೆ ಸಂಬಂಧಿಸಿದ ಸಮಸ್ತ ಜ್ಞಾನ ತನಗೆ ತಿಳಿದಿದೆಯೋ ಇಲ್ಲವೋ ನೋಡಿಕೊಳ್ಳಬೇಕು. ದೇವರಿಗೆ ಸಂಬಂಧಿಸಿದ ಯಾವ ಪ್ರಶ್ನೆಗಾದರೂ ತನ್ನ ಹತ್ತಿರ ಶಾಸ್ತ್ರಬದ್ಧವಾದ ಉತ್ತರ ಇದೆಯೋ ಇಲ್ಲವೋ ನೋಡಿಕೊಳ್ಳಬೇಕು. ದೇವರಿಗೆ ಸಂಬಂಧಿಸಿದ ಸಮಸ್ತ ಜ್ಞಾನವೂ ತಿಳಿದಾಗ, ಎಲ್ಲ ಪ್ರಶ್ನೆಗಳಿಗೂ ಶಾಸ್ತ್ರಬದ್ಧವಾದ ಉತ್ತರ ಇರುತ್ತದೆ. ಹಾಗೆ ಸಮಸ್ತಜ್ಞಾನವನ್ನು ತಿಳಿದವನನ್ನು ಮಾಯೆ ಏನೂ ಮಾಡುವುದಿಲ್ಲ. ಏಕೆಂದರೆ ಮಾಯೆ ಪತಿಯಾದ ದೇವರು ಅವನನ್ನು ಒಪ್ಪಿರುವನು.

ಈಗ ಯಾರಾದರೂ ನನ್ನನ್ನು "ನಿಮ್ಮ ದೃಷ್ಟಿಯಲ್ಲಿ **ಸಮಸ್ತ ಜ್ಞಾನ** ಎಂದರೆ ಏನು" ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರವೇನೆಂದರೆ! ನಮಗೆ ತಿಳಿದ ಮಟ್ಟಿಗೆ ಇಲ್ಲಿಗೆ ಪರಮ ಭಗವದ್ಗೀತೆ, ಪವಿತ್ರ ಖುರಾನ್, ಪರಿಶುದ್ಧ ಬೈಬಲ್ ಗ್ರಂಥಗಳಲ್ಲಿ ಹೇಳಿರುವುದೇ ಅಲ್ಲದೆ, ಇನ್ನೊಂದು ಬಾರಿ ಹೇಳುವುದೆಲ್ಲವೂ ಸಮಸ್ತಜ್ಞಾನವೆಂದು ಹೇಳಬಹುದು. ಹಾಗೆಂದು ಒಂದು ಭಗವದ್ಗೀತೆಯನ್ನು ಓದಿ ನನಗೆ ಸಮಸ್ತಜ್ಞಾನ ತಿಳಿದಿದೆಯೆಂದು ಹೇಳಿದರೆ

ಸರಿಹೋಗುವುದಿಲ್ಲ. ಹಾಗೆಯೇ ಬೈಬಲ್ಲನ್ನು ಓದಿ ಸಮಸ್ತಜ್ಞಾನ ತಿಳಿದಿದೆ ಯೆಂದರೂ ಸರಿಹೋಗುವುದಿಲ್ಲ. **ಮೂಲಗ್ರಂಥಗಳಾದ ಭಗವದ್ಗೀತೆ, ಬೈಬಲ್, ಖುರಾನ್ ಮೂರನ್ನು ಓದಿದ ನಂತರ ಇನ್ನೂ ಏನಾದರೂ ಉಳಿದಿದ್ದರೆ ಅದರೊಂದಿಗೆ ಸಹ ಸಮಸ್ತಜ್ಞಾನವಾಗುತ್ತದೆ. ಒಂದು ವೇಳೆ ಮೂರು ಗ್ರಂಥಗಳಲ್ಲಿ ಇನ್ನೂ ಉಳಿಯದೇ ಎಲ್ಲಾ ಹೇಳಿದ್ದರೆ ಅದೇ ಸಮಸ್ತ ಜ್ಞಾನವಾಗುವುದು.** ಆದರೆ ಯಾವ ಮತದವರು ಆ ಮತ ಗ್ರಂಥವನ್ನು ದೊಡ್ಡದಾಗಿ ಹೇಳಿಕೊಳ್ಳುವರು. ಅದರಲ್ಲಿ ಸಮಸ್ತಜ್ಞಾನವಿದೆಯೆಂದು ಹೇಳುತ್ತಿರುವರು. ಆ ಮಾತು ನಿಜವೇ? ಸುಳ್ಳೇ? ಎಂದು ಹೇಳುವುದಕ್ಕೆ ಒಂದು ಅವಕಾಶ ಇದೆ. ಬೈಬಲ್ ಗ್ರಂಥದಲ್ಲಿ ಯೋಹಾನು ಸುವಾರ್ತೆಯಲ್ಲಿ 16ನೇ ಅಧ್ಯಾಯ 12, 13, 14 ವಚನಗಳಲ್ಲಿ "ನಾನು ನಿಮ್ಮೊಂದಿಗೆ ಹೇಳಬೇಕಾಗಿರುವುವು ಇನ್ನೂ ಅನೇಕ ಸಂಗತಿಗಳಿವೆ. ಆದರೆ ಈಗ ನೀವು ಅವುಗಳನ್ನು ಸಹಿಸುವುದಿಲ್ಲ. ಆದರೆ ಅವನು ಎಂದರೆ ಸತ್ಯಸ್ವರೂಪಿಯಾದ ಆತ್ಮ ಬಂದಾಗ ನಿಮ್ಮನ್ನು ಸರ್ವ ಸತ್ಯದೊಳಗೆ ನಡೆಸುತ್ತದೆ. ಅವನು ತನ್ನಷ್ಟಕ್ಕೆ ತಾನು ಏನೂ ಬೋಧಿಸದೆ, ಏನನ್ನು ಕೇಳುವನೋ ಅವುಗಳನ್ನು ಬೋಧಿಸಿ ಸಂಭವಿಸಬಹುದಾದ ಸಂಗತಿಗಳನ್ನು (ಜ್ಞಾನವನ್ನು) ನಿಮಗೆ ತಿಳಿಸುವನು. ಅವನು ನನ್ನೊಳಗಿನವುಗಳನ್ನು ತೆಗೆದುಕೊಂಡು ನಿಮಗೆ ತಿಳಿಸುವನು." ಈ ಮಾತನ್ನು ಅನುಸರಿಸಿದರೆ ಮೂಲಗ್ರಂಥಗಳಲ್ಲಿ ಪ್ರವಕ್ತರು ಹೇಳಿದ ಜ್ಞಾನವೇ ಅಲ್ಲದೇ ಇನ್ನೂ ಜ್ಞಾನ ಉಳಿದಿದೆಯೆಂದು ಹೇಳಬಹುದು. ಇಷ್ಟೇ ಅಲ್ಲದೇ ಅದೇ ಬೈಬಲ್, ಅದೇ ಯೋಹಾನ್ ಸುವಾರ್ತೆಯಲ್ಲಿ 14ನೇ ಅಧ್ಯಾಯ 26ನೇ ವಾಕ್ಯದಲ್ಲಿ "ಆದರಣಕರ್ತ ಎಂದರೆ ತಂದೆ ನನ್ನ ನಾಮದಲ್ಲಿ ಕಳುಹಿಸುವ ಪರಿಶುದ್ಧಾತ್ಮ **ಸಮಸ್ತವನ್ನು** ನಿಮಗೆ ಬೋಧಿಸಿ ನಿಮ್ಮೊಂದಿಗೆ ಹೇಳಿದ ಸಂಗತಿಗಳೆಲ್ಲವನ್ನು (ಜ್ಞಾನಗಳೆಲ್ಲವನ್ನು) ನಿಮಗೆ ಜ್ಞಾಪಕ ಮಾಡುವನು" ಎಂದಿದೆ. ಅದನ್ನು ಅನುಸರಿಸಿ ನೋಡಿದರೆ ಆದರಣಕರ್ತನಾಗಿ ಬರುವ ವ್ಯಕ್ತಿ ಪ್ರವಕ್ತರು ಹೇಳದ ಸಮಸ್ತ ಜ್ಞಾನವನ್ನು ಬೋಧಿಸುವುದೇ ಅಲ್ಲದೆ, ಹೇಳಿದವುಗಳನ್ನು ಸಹ ವಿಶದೀಕರಿಸಿ ಅರ್ಥವಾಗುವ ಹಾಗೆ ಮಾಡುವನೆಂದು ತಿಳಿಯುತ್ತಿದೆ.

ಮತ್ತೆ ಕೆಲವರು ಕೃಷ್ಣನು, ಏಸು ಪ್ರವಕ್ತರು ಹೇಳಿಹೋದ ನಂತರ ಬಂದ ಪ್ರವಕ್ತನಾದ ಹಜ್ರತ್ ಮಹಮ್ಮದ್ ಪ್ರವಕ್ತರವರು ಖುರಾನ್‌ನಲ್ಲಿ ಸಮಸ್ತ ಜ್ಞಾನ ಹೇಳಿರಬಹುದಲ್ಲವೇ ಎಂದು ಅವರ ಉದ್ದೇಶವನ್ನು ವ್ಯಕ್ತಪಡಿಸಬಹುದು. ಇದು ಸಮಂಜಸವಾದ ಮಾತೇ! ಕೊನೆಯ ಪ್ರವಕ್ತ ಎಂದು ಹೇಳಲಾದ ಮಹಮ್ಮದ್ ಪ್ರವಕ್ತರವರು ಹೇಳಿದ್ದಾರೆ ಎನ್ನುವುದಕ್ಕೆ ಬರುವವನು ಆದರಣಕರ್ತ ಎಂದು ತಿಳಿದುಬಂದಿದೆ. ಆದರಣಕರ್ತ ಬೇರೆ, ಪ್ರವಕ್ತ ಬೇರೆ. ಪ್ರವಕ್ತ ಸಮಸ್ತ ಪ್ರಪಂಚಕ್ಕೆ ತಿಳಿದುಬರುವವನು. ಆದರೆ ಆದರಣಕರ್ತ ಬದುಕಿರುವಾಗ ಯಾರಿಗೂ ತಿಳಿದುಬರುವುದಿಲ್ಲ. ಈ ವಿಷಯವಾಗಿ ಬೈಬಲ್ ಗ್ರಂಥದಲ್ಲಿ ಯೋಹಾನ್ ಸುವಾರ್ತೆಯಲ್ಲಿ 14ನೇ ಅಧ್ಯಾಯ, 17ನೇ ವಾಕ್ಯ **"ಲೋಕವು ಅವನನ್ನು ನೋಡುವುದಿಲ್ಲ, ಅವನನ್ನು ತಿಳಿಯುವುದಿಲ್ಲ ಆದ್ದರಿಂದ ಅವನನ್ನು ಹೊಂದುವುದಿಲ್ಲ. ನೀವು ಅವನನ್ನು ತಿಳಿದುಕೊಳ್ಳುತ್ತೀರ, ಅವನು ನಿಮ್ಮೊಂದಿಗೆ ಸಹ ನಿವಾಸಿಸುವನು, ನಿಮ್ಮಲ್ಲಿರುವನು."** ಎಂದಿದೆ. ಇದನ್ನು ಅನುಸರಿಸಿ ನೋಡಿದರೆ ಆದರಣಕರ್ತನಾಗಿ ಬರುವವನು ಪ್ರವಕ್ತನಲ್ಲವೆಂದು ತಿಳಿದಿದೆ. ಆದರಣಕರ್ತನಾಗಿ ಬಂದವನು ಪ್ರಪಂಚದ ಜನರಿಗೆ ತಿಳಿಯುವುದಿಲ್ಲವೆಂದು ತಿಳಿದಿದೆ. ಪ್ರವಕ್ತನ ಗುರುತು ಹೊಂದಿದವನು, ಆದರಣಕರ್ತ ಗುರುತು ಇಲ್ಲದವನು, ಆದರೆ ಪ್ರಭು ಇದ್ದ ಕಾಲದಲ್ಲಿ ಪ್ರಭು ಯಾರೊಂದಿಗೆ ಈ ಮಾತನ್ನು ಆ ದಿನವೇ ಹೇಳಿದ್ದಾನೋ, ಅವರು ಮಾತ್ರ ಆದರಣಕರ್ತನನ್ನು ಗುರುತಿಸುವರು. ಅವರ ಮಧ್ಯದಲ್ಲಿ ಅವನು ಜೀವಿಸುವನು. ಪ್ರಭು ತನ್ನ ಹನ್ನೊಂದು ಜನ ಶಿಷ್ಯರಿಗೆ ಈ ಮಾತನ್ನು ಹೇಳಿದ್ದಾನೆ. ಆದರೆ ಆದರಣಕರ್ತನಾಗಿ ಬರುವವನು ಹತ್ತು, ಹನ್ನೊಂದು ಜನರಿಗೆ ಬಿಟ್ಟರೆ ಬೇರೆ ಯಾರಿಗೂ ತಿಳಿಯುವುದಿಲ್ಲವೆಂದು ಅರ್ಥವಾಗುತ್ತಿದೆ. ಆದ್ದರಿಂದ ಆದರಣಕರ್ತ ಪ್ರವಕ್ತ ನಲ್ಲವೆಂದು ಹೇಳಬಹುದು. ಲೋಕದಿಂದ ಗುರುತಿಸಲಾಗದ ಪ್ರವಕ್ತನಲ್ಲದಂತಹ ವ್ಯಕ್ತಿಯಿಂದ ಪ್ರವಕ್ತರು ಬಿಟ್ಟ ಜ್ಞಾನವನ್ನು ಸಹ ಹೇಳಲಾಗುವುದು ಮತ್ತು ಪ್ರವಕ್ತರು ಹೇಳಿದ ಜ್ಞಾನವನ್ನು ಸಹ ಅವನು ವಿಶದೀಕರಿಸಿ ಹೇಳುವನೆಂದು ತಿಳಿದುಬರುತ್ತದೆ.

ಮಾಯೆಯನ್ನು ಜಯಿಸಿ ದೇವರನ್ನು ಸೇರಿಕೊಳ್ಳಬೇಕೆಂದರೆ, ಮೊದಲು ಮೂಲಗ್ರಂಥಗಳಾದ ಮೂರು ಮತಗ್ರಂಥಗಳನ್ನು ಓದಬೇಕು. ಮೂರು ಮತ ಗ್ರಂಥಗಳಲ್ಲಿ ಸ್ವಲ್ಪ ವ್ಯತ್ಯಾಸದಲ್ಲಿ ಒಂದೇ ಜ್ಞಾನ, ಒಂದೇ ದೇವರನ್ನು ಕುರಿತು ಹೇಳಿರುವಾಗ, ಆ ಗ್ರಂಥಗಳ ಜ್ಞಾನವೇ ಬಹಳ ಜನರಿಗೆ ಅರ್ಥವಾಗದೇ ನಮ್ಮ ಜ್ಞಾನ ಬೇರೆ, ನಮ್ಮ ದೇವರು ಬೇರೆ ಎನ್ನುವ ಸ್ಥಿತಿಯಲ್ಲಿದ್ದಾರೆ. ಮೂವರು ಪ್ರವಕ್ತರು ಹೇಳಿದ ಜ್ಞಾನವೇ ಅರ್ಥವಾಗದಿರುವಾಗ, ಅವರು ಮಾಯೆಯನ್ನು ಹೇಗೆ ಜಯಿಸಬಲ್ಲರು? ಒಂದು ಗ್ರಂಥವನ್ನು ಮಾತ್ರ ನೋಡಿ ಉಳಿದ ಎರಡು ಗ್ರಂಥಗಳನ್ನು ನೋಡದವರು ತನ್ನ ಜ್ಞಾನವೇ ದೊಡ್ಡದೆಂದುಕೊಳ್ಳುತ್ತಿರುವರು. ತನ್ನ ಪ್ರವಕ್ತ ಹೇಳಿರುವುದು ಬಿಟ್ಟರೇ ಉಳಿದ ಪ್ರವಕ್ತರು ಹೇಳಿರುವುದನ್ನು ಗುರುತಿಸದವನು, ಪ್ರವಕ್ತ ಸಹ ಅಲ್ಲದ ಆದರಣಕರ್ತ ಹೇಳುವ ಜ್ಞಾನವನ್ನು ಗುರುತಿಸುವನೆ? ತನ್ನ ಮತದಲ್ಲಿನ ಜ್ಞಾನವೇ ದೊಡ್ಡದೆಂದುಕೊಂಡು, ಉಳಿದ ಮತದಲ್ಲಿ ಏನು ಹೇಳಿದ್ದಾರೆಂದು ನೋಡದವನು ತನಗೆ ತಿಳಿದ ಜ್ಞಾನವೇ ದೊಡ್ಡದೆಂದು, ಗೋಡೆಯನ್ನು ಕಟ್ಟಿಕೊಂಡು ಅದನ್ನು ದಾಟಿ ಬಾರದಿರುವನು. ಹಾಗಿರುವಾಗ ಇನ್ನೂ ತಿಳಿಯಬೇಕಾದ ಜ್ಞಾನವನ್ನು ಹೇಗೆ ತಿಳಿದುಕೊಳ್ಳುವನು? ಏಸು ಹೇಳಿದಂತೆ ಆದರಣಕರ್ತ ಬಂದು ಸಮಸ್ತ ಜ್ಞಾನವನ್ನು ತಿಳಿಸುವನು ಎಂದಾಗ, ಆ ವಿಷಯವೇ ಇತ್ತ ಹಿಂದೂಗಳಿಗೆ, ಅತ್ತ ಮುಸ್ಲಿಂರಿಗೆ ತಿಳಿಯದಿರು ವಾಗ, ಇನ್ನು ನಾವು ತಿಳಿದುಕೊಳ್ಳುವ ಜ್ಞಾನವೇ ಇಲ್ಲವೆಂದುಕೊಂಡು ಮೇರೆ ಏರ್ಪಡಿಸಿಕೊಳ್ಳುವರು. ಆಗಿರುವಾಗ ತಮ್ಮ ಮತದಲ್ಲಿ ಅರ್ಥವಾಗದ ಇಲ್ಲವೇ ಅಪಾರ್ಥವಾದ (ಬೇರೆ ಅರ್ಥ ಮಾಡಿಕೊಂಡ) ವುಗಳನ್ನು ಆದರಣಕರ್ತ ಹೇಳಿದರೂ ತಿಳಿದುಕೊಳ್ಳಲಾರರು. ತಮ್ಮ ಗ್ರಂಥದಲ್ಲಿ ಹೇಳಿದ ಜ್ಞಾನಕ್ಕೆ ಸರಿಯಾದ ವಿವರವನ್ನು ತಿಳಿಸಿದಾಗ ತಿಳಿಯದಿದ್ದವನು, ಇನ್ನೂ ತಿಳಿಯಬೇಕಾದ ಜ್ಞಾನವನ್ನು ಕುರಿತು ತಿಳಿದುಕೊಳ್ಳುವುದಕ್ಕೆ ಪ್ರಯತ್ನ ಮಾಡುವುದಿಲ್ಲ. ಅಂತಹವನಿಗೆ ಸ್ವರ್ಗಕ್ಕೆ ಮತ್ತು ಪರಲೋಕಕ್ಕಿರುವ ವ್ಯತ್ಯಾಸವು ಸಹ ತಿಳಿದಿರುವುದಿಲ್ಲ. ಈ ದಿನ ಗುರುಗಳಾಗಿ

ಬೋಧಕರಾಗಿ ಚಲಾವಣೆಯಾಗುವವರು, ತಮ್ಮ ಜ್ಞಾನವನ್ನು ಬಿಟ್ಟರೆ ಇತರ ಪ್ರವಕ್ತರು ಹೇಳಿದ ಜ್ಞಾನವನ್ನು ಒಪ್ಪಿಕೊಳ್ಳುವುದಿಲ್ಲ. ಇತರ ಮತವನ್ನು ದ್ವೇಷಿಸುವವರು ಆ ಮತದಲ್ಲಿನ ಜ್ಞಾನವೇ ತಿಳಿಯದಿರುವಾಗ, ಆದರಣಕರ್ತ ತಿಳಿಸುವ ಜ್ಞಾನವನ್ನು ಸ್ವಲ್ಪವೂ ಲೆಕ್ಕದಲ್ಲಿಡುವುದಿಲ್ಲ. ಆದರಣಕರ್ತ ಸಮಸ್ತ ಜ್ಞಾನವನ್ನು ತಿಳಿಸಿದರೂ, ಅವನನ್ನು ಕನಿಷ್ಠ ಜ್ಞಾನಿಯಾಗಿ ಸಹ ಗುರುತಿಸುವುದಿಲ್ಲ. ಹಾಗಿರುವಾಗ ಯಾವ ಮತಸ್ಥನಾಗಲಿ ಸಮಸ್ತಜ್ಞಾನವನ್ನು ತಿಳಿಯುವುದಕ್ಕೆ ಅವಕಾಶವಿಲ್ಲ. ಅಂಥವನು ಸಂಪೂರ್ಣ ಜ್ಞಾನಿ ಆಗಲಾರನು. ಅವನು ಮಾಯೆಯನ್ನು ದಾಟಿ ದೇವರ ಹತ್ತಿರಕ್ಕೆ ಹೋಗಲಾರನು. ಮಾಯೆ ಮತದ ಮೇಲೆ ಇಷ್ಟವನ್ನು ಕಲ್ಪಿಸಿ, ಮತಗಳಲ್ಲಿಯೇ ಹುಟ್ಟುವಂತೆ ಮಾಡುತ್ತದೆ. ಜ್ಞಾನ ಪಥದಲ್ಲಿ ಪಯಣಿಸಲು ಬಿಡುವುದಿಲ್ಲ.

ಪ್ರಸ್ತುತ ಕಾಲದಲ್ಲಿ ಮಾಯೆ ಮನುಷ್ಯರ ಮೇಲೆ ಮತ್ತೊಂದು ಅಸ್ತ್ರವನ್ನು ಪ್ರಯೋಗಿಸಿ ಸಮಸ್ತ ಜ್ಞಾನವನ್ನು ತಿಳಿಯುವುದಕ್ಕೆ ಅವಕಾಶವಿಲ್ಲದೆ ಮಾಡಿದೆ. ಕ್ರೈಸ್ತ, ಇಸ್ಲಾಂಗಿಂತ ಎಷ್ಟೋ ಸಾವಿರ, ಲಕ್ಷ ವರ್ಷಗಳಿಂದಿರುವ ಹಿಂದೂ ಮತದಲ್ಲಿ ದೇವರು ಹೇಳಿದ ಜ್ಞಾನವನ್ನು ಮುಚ್ಚಿಡುವುದಕ್ಕೆ, ಮನುಷ್ಯ ತನ್ನ ಪ್ರಭಾವದಿಂದ ಹೊರಬೀಳದಿರುವುದಕ್ಕೆ, ಇದೇ ನಿಜವಾದ ಜ್ಞಾನವೆಂದು ಮನುಷ್ಯನಿಗೆ ತೋರಿಸುತ್ತಾ, ವೇದಗಳನ್ನು ಮನುಷ್ಯ ದೊಡ್ಡದಾಗಿ ಪರಿಗಣಿಸುವಂತೆ ಮಾಯೆ ಮಾಡಿದೆ. ಸೃಷ್ಠಿ ಆದಿಯಲ್ಲಿಯೇ ದೇವರು ಸೂರ್ಯನಿಂದ ಭೂಮಿ ಮೇಲೆ ಪ್ರವೇಶವಿಟ್ಟ ದೈವಜ್ಞಾನವನ್ನು, ಮಧ್ಯದಲ್ಲಿ ಬಂದಿರುವ ವೇದಗಳು ಮುಚ್ಚಿಟ್ಟಿವೆ. ವೇದಗಳು ದೇವರು ಹೇಳಿದ ಜ್ಞಾನಕ್ಕಿಂತ ದೊಡ್ಡದಾಗಿ ಮನುಷ್ಯರಿಗೆ ಕಾಣಿಸುವಂತೆ ಮಾಯೆ ಮಾಡಿದೆ. ಅದರಿಂದ ವೇದಗಳ ಬಲೆಯಲ್ಲಿ ಬಿದ್ದ ಹಿಂದುಗಳೆಲ್ಲರೂ ದೈವಜ್ಞಾನವನ್ನು ಮರೆತುಹೋಗಿ, ವೇದಗಳೇ ದೊಡ್ಡ ಜ್ಞಾನವೆಂದು ಲೆಕ್ಕಿಸಿಕೊಂಡಿದ್ದಾರೆ. ವೇದಗಳಿಂದ ಮನುಷ್ಯ ದೇವರಿಗೆ ದೂರವಾಗಿ ಹೋಗಿದ್ದಾನೆ. ಸೃಷ್ಠಿ ಆದಿಯಲ್ಲಿ ದೇವರು ತನ್ನ ಜ್ಞಾನವನ್ನು ಹೇಳಿದರೆ, ಮಾಯೆ ತನ್ನ ವೇದಗಳನ್ನು ನಿಜವಾದ ಜ್ಞಾನವಾಗಿ ಪ್ರಚಾರ ಮಾಡಿ, ಮನುಷ್ಯರನ್ನು ಅದರಲ್ಲಿ ಸಿಕ್ಕಿಕೊಳ್ಳುವ ಹಾಗೆ ಮಾಡಿದೆ. ಆಗ ದೇವರು ತನ್ನ ಪ್ರವಕ್ತರಿಂದ

ಬೇರೆ ಬೇರೆ ದೇಶಗಳಲ್ಲಿ ತನ್ನ ಜ್ಞಾನವನ್ನು ಹೇಳಿಸಿದ್ದಾನೆ. ಹಾಗೆ ಪ್ರವಕ್ತರು ಹೇಳಿದ ಜ್ಞಾನ ಹಿಂದುಗಳಿಗೆ ಭಗವದ್ಗೀತೆಯಾಗಿ, ಕ್ರೈಸ್ತರಿಗೆ ಬೈಬಲ್ಲಾಗಿ, ಮುಸ್ಲಿಮರಿಗೆ ಖುರಾನ್ ಆಗಿದೆ. ಆದರೆ ಭಗವದ್ಗೀತೆಗಿಂತ ಮೊದಲೇ ವೇದಗಳಿದ್ದುದರಿಂದ ಹಿಂದುಗಳು ವೇದಗಳಿಗಿಂತ ಭಗವದ್ಗೀತೆಯನ್ನು ಮುಖ್ಯ ಜ್ಞಾನವಾಗಿ ಲೆಕ್ಕಿಸದೆ, ವೇದಗಳನ್ನೇ ದೊಡ್ಡ ಜ್ಞಾನವಾಗಿಟ್ಟುಕೊಂಡಿದ್ದಾರೆ. ಭಗವದ್ಗೀತೆಯಲ್ಲಿ ದೇವರು ವೇದಗಳಿಂದ ನಾನು ತಿಳಿದು ಬರುವುದಿಲ್ಲವೆಂದು ವಿಶ್ವರೂಪ ಸಂದರ್ಶನ ಯೋಗದಲ್ಲಿ 48ನೇ ಶ್ಲೋಕದಲ್ಲಿ, 53ನೇ ಶ್ಲೋಕದಲ್ಲಿಯೂ ಹೇಳಿದರೂ, ಅವನ ಮಾತನ್ನು ಹಿಂದುಗಳು ಕೇಳುತ್ತಿಲ್ಲ. ಭಗವದ್ಗೀತೆಯಲ್ಲಿ "ತ್ರೈಗುಣ್ಯಾ ವಿಷಯಾವೇದಾ" ಎಂದು ಸಾಂಖ್ಯ ಯೋಗದಲ್ಲಿ 45ನೇ ಶ್ಲೋಕದಲ್ಲಿ ಹೇಳಿದ್ದಾನೆ. ಅದರ ಅರ್ಥ **"ಮೂರು ಗುಣಗಳ ವಿಷಯಗಳೇ ವೇದಗಳು"** ಎಂದಿದೆ. ಅದೇ ಭಗವದ್ಗೀತೆಯಲ್ಲಿ ವಿಜ್ಞಾನಯೋಗದಲ್ಲಿ 14ನೇ ಶ್ಲೋಕದಲ್ಲಿ "ಗುಣಮಯಿ ಮಮ ಮಾಯ" ಎಂದಿದ್ದಾನೆ. ಗುಣಗಳೇ ಮಾಯೆ ಎಂದು ಸಹ ಹೇಳಿದ್ದಾನೆ. ಇದನ್ನು ಅನುಸರಿಸಿ ನೋಡಿದರೆ ವೇದಗಳೇ ಮಾಯೆ ಎಂದು ಅರ್ಥವಾಗುತ್ತದೆ. ವೇದರೂಪದಲ್ಲಿರುವ ಮಾಯೆಯನ್ನು ಕುರಿತು ಗೀತೆಯಲ್ಲಿ ಹೇಳಿದರೂ, ಹಿಂದುಗಳು ಭಗವದ್ಗೀತೆಯನ್ನು ಲೆಕ್ಕಿಸದೆ, ಮಾಯೆಯಾದ ವೇದಗಳನ್ನೇ ಹೇಳಿಕೊಳ್ಳುತ್ತಾ, ಇದೇ ನಿಜವಾದ ಜ್ಞಾನವೆಂದು ಅಂದುಕೊಳ್ಳುತ್ತಿದ್ದಾರೆ. ಈ ರೀತಿ ಗೀತೆಯಲ್ಲಿ ದೇವರು ಎಚ್ಚರಿಸಿದರೂ, ಹೊರಬೀಳದ ಹಿಂದುಗಳಿರುವಾಗ, ವೇದಗಳ ರೂಪದಲ್ಲಿರುವ ಮಾಯೆ ಹೊಸದಾಗಿ ಇತರ ಮತಗಳಿಗೂ ಕೂಡಾ ವ್ಯಾಪಿಸಿದೆ. ಕ್ರೈಸ್ತರು ತಮ್ಮ ಪ್ರಭುವನ್ನು ಕುರಿತು ವೇದಗಳು ಕೂಡಾ ದೊಡ್ಡದಾಗಿ ಹೇಳಿವೆಯೆಂದು ಹೇಳುತ್ತಿದ್ದಾರೆ. ಪ್ರಭು ರಕ್ತದಿಂದ ಪಾಪ ಪರಿಹಾರವಾಗುವುದೆನ್ನುವ ಶ್ಲೋಕವನ್ನು, ಮತ್ತೆ ಕೆಲವು ಶ್ಲೋಕಗಳನ್ನು ಹೇಳುತ್ತಾ ಅವರು ಕೂಡಾ ತಮ್ಮ ತಲೆಯಲ್ಲಿ ವೇದಗಳನ್ನಿಟ್ಟು ಕೊಂಡಿದ್ದಾರೆ.

ಅಷ್ಟಕ್ಕೇ ನಿಲ್ಲದೇ ಪ್ರಸ್ತುತ ಕಾಲದಲ್ಲಿ ಕೆಲವರು ಇಸ್ಲಾಂ ಬೋಧಕರು ಕೂಡ ವೇದಗಳನ್ನು ಕಂಠಸ್ಥ ಮಾಡಿಕೊಂಡು, ವೇದಗಳಲ್ಲಿನ ಸಂಸ್ಕೃತ

ಶ್ಲೋಕಗಳನ್ನು ಹೇಳುತ್ತಾ, ತಮ್ಮ ಇಸ್ಲಾಂಗೆ ಸಂಬಂಧಿಸಿದ ಸಮಾಚಾರವು ಬಹಳ ವೇದಗಳಲ್ಲಿದೆಯೆಂದು ಹೇಳುತ್ತಿದ್ದಾರೆ. ವಿಶೇಷವಾಗಿ ಋಗ್ವೇದವನ್ನು ಹೆಚ್ಚಾಗಿ ಹೇಳುತ್ತಿದ್ದಾರೆ. ಇದನ್ನೆಲ್ಲಾ ನೋಡಿದರೆ ವೇದಗಳು ಹಿಂದುಗಳನ್ನೇ ಅಲ್ಲದೆ ಉಳಿದ ಕ್ರೈಸ್ತ, ಇಸ್ಲಾಂ ಮತದವರನ್ನು ಕೂಡಾ ಆಕರ್ಷಿಸಿವೆಯೆಂದು ತಿಳಿಯುತ್ತಿದೆ. ಮೂರು ಗುಣಗಳ ವಿಷಯಗಳೇ ವೇದಗಳೆಂದು, ಗುಣಗಳೇ ನನ್ನ ಮಾಯೆ ಎಂದು ದೇವರೇ ಗೀತೆಯಲ್ಲಿ ಹೇಳಿರುವುದರಿಂದ ವೇದಗಳೇ ಮಾಯೆಯೆಂದು ತಿಳಿದು ಹೋಗಿದೆ. ಈಗ ಮೂರು ಮತದವರು ಕಾಣಿಸುವ ವೇದಗಳನ್ನು ಆಶ್ರಯಿಸುತ್ತಾ, ಕಾಣಿಸದ ಮಾಯೆಯಲ್ಲಿ ಸಿಕ್ಕಿಕೊಂಡಿದ್ದಾರೆ. ಮಾಯೆಯಲ್ಲಿ ಸಿಕ್ಕಿಕೊಂಡವರನ್ನು ದೇವರಿಗೆ ಇಷ್ಟವಿಲ್ಲದವರನ್ನಾಗಿ ಮಾಯೆ ಗುರುತಿಸಿ, ದೇವರ ಮಾರ್ಗದಿಂದ ದೂರ ಮಾಡಬಲ್ಲದು. ಮಾಯೆ ತನ್ನ ಜ್ಞಾನವೇ ದೊಡ್ಡದೆಂದು ತೋರಿಸುತ್ತಾ, ಅದರಲ್ಲಿ ಕೂಡಾ ದೇವರ ವಿಷಯ ಗಳಿರುವ ಹಾಗೆ ಅಲ್ಲಲ್ಲಿ ದೈವವನ್ನು ಕುರಿತೇ ಹೇಳಿದಂತೆ ಕಾಣಿಸುತ್ತಾ, ದೇವರಿಗೆ ದೂರ ಮಾಡುತ್ತಿದೆ. ಹಾಗಿರುವಾಗ ಮನುಷ್ಯ ದೇವರ ಸಮಸ್ತ ಜ್ಞಾನವನ್ನು ತಿಳಿಯಲಾರನು. ಆದ್ದರಿಂದ ಮನುಷ್ಯ ಮಾಯೆಯಿಂದ ಹೊರಬೀಳುವುದಕ್ಕೆ ಮೂರು ಮತಗಳ ಗ್ರಂಥಗಳನ್ನು ಓದಬೇಕು. ಮೂವರು ಪ್ರವಕ್ತರು ಹೇಳಿರುವುದನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಬೇಕು. ನಂತರ ತಿಳಿಯದ ವ್ಯಕ್ತಿ (ಆದರಣಕರ್ತ) ಹೇಳುವ ಸಮಸ್ತ ಜ್ಞಾನವನ್ನೂ ಅಸೂಯೆ ಇಲ್ಲದೇ ತಿಳಿಯಬೇಕು. ಆಗಲೇ ಮನುಷ್ಯನಿಗೆ ಜ್ಞಾನ ಅರ್ಥವಾಗುವುದು. ಸಮಾದಿಯೊಳಗೆ ಸೇರದೇ ದೇವರೊಳಗೆ ಸೇರುವನು.

**ಮುಕ್ತಾಯ**



***ಅಸತ್ಯವನ್ನು ಸಾವಿರ ಜನ ಹೇಳಿದರೂ ಅದು ಸತ್ಯವಲ್ಲ,***

***ಸತ್ಯವನ್ನು ಸಾವಿರ ಜನ ಅಲ್ಲವೆಂದರೂ ಅದು ಅಸತ್ಯವಲ್ಲ.***

1. ತಿಳಿಯದ ಆಕಾಶ ಒಂದಾಗಿದ್ದು ತಿಳಿಯುವ ಸೂರ್ಯ, ಚಂದ್ರ, ನಕ್ಷತ್ರಗಳು ಮೂರು (ತ್ರೈತ) ಇವೆ.
2. ತಿಳಿಯದ ಕಾಲ ಒಂದಾಗಿದ್ದು ತಿಳಿಯುವ ದಿನ, ಮಾಸ, ಸಂವತ್ಸರ ಮೂರು (ತ್ರೈತ) ಇವೆ.
3. ತಿಳಿಯದ ಪರಮಾತ್ಮ ಒಂದಾಗಿದ್ದು ತಿಳಿಯುವ ಅಂಡಜ, ಪಿಂಡಜ, ಉದ್ಭಿಜ ಮೂರು (ತ್ರೈತ) ಇವೆ.



**ನಿಜವಾದ ರಚನಕಾರರು ಯಾರೋ ಗೊತ್ತಾ?**

**ಸಂಚಲನಾತ್ಮಕ ರಚನಕಾರ**

| | | |
|---|---|---|
| ಸಂ | = | ಒಳ್ಳೆ |
| ಚಲನೆ | = | ಚೈತನ್ಯ ಹೊಂದಿದ |
| ಆತ್ಮಕ | = | ಎರಡನೆ ಆತ್ಮ |
| ರಚನಕಾರ | = | ಬರೆಸಿದವನು |

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ,
ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.

2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.

3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.

4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.

5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.

6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ




## ಇಂದೂ ಜ್ಞಾನವೇದಿಕೆ (I.G.V)

**(Regd.No.: 168/2004)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

www. thraithashakam.org

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಸುವಾರ್ತ ಕ್ರೈಸ್ತವ ಸಂಘ







## ಸುವಾರ್ತ ಕ್ರೈಸ್ತವ ಸಂಘ (S.K.S)


(Regd.No.: 159/2015)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@suvarthakraisthavasangham.org




*www. suvarthakraisthavasangham.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ




(Regd.No.459/20111)

**ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ (K.I.S.S)**

(Regd.No.: 459/2011)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@khudaislamicspiritualsociety.org

*www. khudaislamicspiritualsociety.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಪ್ರಬೋಧ ಸೇವಾ ಸಮಿತಿ




**ಪ್ರಬೋಧ ಸೇವಾ ಸಮಿತಿ (P.S.S.)**

(Regd.No.: 304/1991)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

*www. thraithashakam.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್రీಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದ್ರಾವಿಡ ಶ್ರೇಷ್ಠಿ ಸಂಘ




**ದ್ರಾವಿಡ ಶ್ರೇಷ್ಠಿ ಸಂಘ (D.S.S)**

**(Regd.No.: /2015)**

ಕೃಷ್ಣಾ ನಗರ್ ಕಾಲನೀ, ಕೊತ್ತಕೋಟ(ಮಂ),

ಮಹಬೂಬ್‌ನಗರ್ (ಜಿಲ್ಲಾ), ತೆಲಂಗಾಣ–509381

e-mail id : info@dravidashreshtisangham.org

***www.dravidashreshtisangham.org***

# ಸಮಾಧಿ


Author :
The Only Guru of Three Religions
The Spiritual Emperor, Thraitha Theorem Originator
Sri Acharya Prabodhananda Yogeeshwarulu